

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೭ ಫೆಬ್ರವರಿ ೨೦೧೧ ಸಂಚಿಕೆ : ೨

ಡಿಸೆಂಬರ್ ೧೯ ರಂದು ಶ್ರೀಮಠದಲ್ಲಿ ನಡೆದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೫೬ ನೇ ವಾರ್ಷಿಕ ಮಹಾಧಿವೇಶನ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ, ಕಿರಿಯ ಶ್ರೀಗಳವರ ಉಪಸ್ಥಿತಿಯಲ್ಲಿ ನಡೆಯಿತು. ವೇದಿಕೆಯಲ್ಲಿ ಶ್ರೀ ಆರ್. ಮುದ್ದುರಂಗಯ್ಯ, ಶ್ರೀ ಕುಂ.ವೀರಭದ್ರಪ್ಪ, ಶ್ರೀ ಗೊ.ರು.ಚನ್ನಬಸಪ್ಪ, ಡಾ. ಹೆಚ್. ಹನುಮಂತರಾಯ ಹಾಗೂ ಶ್ರೀ ವಿರೂಪಾಕ್ಷಯ್ಯ ಅವರು ಉಪಸ್ಥಿತರಿದ್ದರು



ಶ್ರೀಮಠದಲ್ಲಿ ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಏರ್ಪಡಿಸಿದ್ದ ಬೃಹತ್ ಉಚಿತ ಆರೋಗ್ಯ ತಪಾಸಣಾ ಶಿಬಿರವನ್ನು ಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ವಿ. ಸೋಮಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು



ಹೊಳೆನರಸಿಪುರದಲ್ಲಿ ಏರ್ಪಡಿಸಿದ್ದ ಗುರುವಂದನ ಸಮಾರಂಭವನ್ನು ಪೂಜ್ಯ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ವಿವಿಧ ಮಠಗಳ ಹರಗುರುಚರಮೂರ್ತಿಗಳು ಹಾಗೂ ಗಣ್ಯರು ಉಪಸ್ಥಿತರಿದ್ದರು



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೭ ಫೆಬ್ರವರಿ ೨೦೧೧ ಸಂಚಿಕೆ : ೨

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


## ಒಳಪುಟಗಳಲ್ಲಿ ......................






ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ

ಮನದ ಮಾಲಿನ್ಯವ ಕಳೆಯಲು ರೂಪುಗೊಂಡಂಥವು ಜಾತ್ರೆಗಳು. ಯಾತ್ರೆಯ ಮತ್ತೊದು ಮುಖವೇ ಜಾತ್ರೆ. ಗ್ರಾಮೀಣರು ಮಾಡುವ ಯಾತ್ರೆಗಳೆಂದರೆ ಜಾತ್ರೆಗಳು. ವರ್ಗ ವರ್ಣ ವಯಲಿಂಗ ಭೇದವಿಲ್ಲದೆ ಸಮಾವೇಶಗೊಳ್ಳುವ ಜನಸಮೂಹಗಳು. ಜನರೊಂದಿಗೆ ದನಗಳೂ ಜಾತ್ರೆಯಲ್ಲಿ ಸೇರಿವುದು ಜನ-ಜಾನುವಾರುಗಳ ಅನೌಪಚಾರಿಕ ಸಮ್ಮೇಳನಗಳೇ ಎನ್ನಬಹುದು. ಕನ್ಯಾಕುಮಾರಿಯಿಂದ ಹಿಮಗಿರಿಯವರೆಗೆ ಒಂದಲ್ಲ ಒಂದು ಹೆಸರಿನಲ್ಲಿ ವರ್ಷದುದ್ದಕ್ಕೂ ಜಾತ್ರೆಗಳು ನಡೆಯುತ್ತಲೇ ಇರುತ್ತವೆ.

ಕರ್ನಾಟಕದಲ್ಲಂತೂ ಜಾತ್ರೆಗಳು ನಡೆಯದ ದಿನವೇ ಇಲ್ಲವೆಂದರೂ ಸರಿಯೇ. ಸೂರ್ಯೋದಯದಿಂದ ಮೊದಲುಗೊಂಡು ಸೂರ್ಯಾಸ್ತಮದವರೆಗೆ ಆನಂತರ ಇಡೀ ರಾತ್ರಿ ಪೂರ್ಣವೂ ಹಲವು ಹನ್ನೊಂದು ರೂಪದಲ್ಲಿ ನೂರಾರು ದೇವ-ದೇವತೆಗಳ ಹೆಸರಿನಲ್ಲಿ ಜಾತ್ರೆಗಳು ನಡೆಯುತ್ತಲೇ ಇವೆ.

ಶಿವಶರಣರು ಜೀವನೋದ್ದೇಶವನ್ನು ಜನತೆಗೆ ಮಾಡಿಕೊಟ್ಟ ಮಹಾನುಭಾವರು. 'ಇಲ್ಲಿ ಸಲ್ಲುವ ಮತ್ತು ಅಲ್ಲಿಯೂ ಸಲ್ಲುವ' ಬದುಕಿನ ಮಾರ್ಗವನ್ನು ತೋರಿಸಿದವರು. ಆ ಪರಂಪರೆಯಲ್ಲಿ ಬೆಳಗಿದ ಮಹಾನುಭಾವರು ತೋಂಟದ ಶ್ರೀ ಸಿದ್ಧಲಿಂಗೇಶ್ವರರು. ವಿರಕ್ತ ಶ್ರೀಗಳನ್ನು ಬೆನ್ನಿಗೆ ಕಟ್ಟಿಕೊಂಡು ದೇಶ ಪರ್ಯಟನೆ ಮಾಡುತ್ತ ಜನಜೀವನಕ್ಕೆ ಶಿವಪಥವನ್ನು ತೋರಿಸಿದ ಪುಣ್ಯಪುರುಷರು. ಶ್ರೀಮಠ ಸಿದ್ಧಗಂಗೆಯಲ್ಲಿ ಕೆಲಕಾಲ ಶಿವಪೂಜಾನುಷ್ಠಾನ ಮಾಡಿ ಕ್ಷೇತ್ರ ಪಾವಿತ್ರ್ಯಕ್ಕೆ ಕಾರಣರಾದವರು. ಅವರ ಪಾದ ಸ್ಪರ್ಶದಿಂದ ಪವಿತ್ರವಾದ ಶ್ರೀಮಠದಲ್ಲಿ ಪ್ರತಿವರ್ಷ ಶಿವರಾತ್ರಿ ಸಂದರ್ಭದಲ್ಲಿ ಜಾತ್ರೆ ನಡೆಯುತ್ತ ಬಂದಿದೆ. ಪೂಜ್ಯ ಶ್ರೀ ಉದ್ದಾನಮಹಾಸ್ವಾಮಿಗಳ ಕಾಲದಿಂದ ಮಹಾನವಮಿ ಸಂದರ್ಭದಲ್ಲಿ ನಡೆಯುತ್ತಿದ್ದ ಶ್ರೀಮಠದ ಜಾತ್ರೆ ಶಿವರಾತ್ರಿ ಸಂದರ್ಭದಲ್ಲಿ ನಡೆಯಲು ಪರಿವರ್ತಿತವಾಯಿತು. ಒಂದು ನೂರು ವರ್ಷಗಳಿಗೂ ಹೆಚ್ಚು ಇತಿಹಾಸ ಹೊಂದಿರುವ ಜನಜಾನುವಾರುಗಳ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರೆ ಇಂದು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ ಜನಬದುಕಬೇಕೆಂಬ' ಮಹೋದ್ದೇಶದಿಂದ ಅನೌಪಚಾರಿಕ ಶೈಕ್ಷಣಿಕ ಸಮ್ಮೇಳನದ ರೀತಿಯಲ್ಲಿ ನಡೆಸಿಕೊಂಡು ಬಂದಿರುವುದು ಈ ನಾಡಿನ ಮಹಾಭಾಗ್ಯ. ಧಾರ್ಮಿಕ ಮುಖವಾಗಿ ದೇವರ ಉತ್ಸವಗಳು, ಸಾಹಿತ್ಯಮುಖವಾಗಿ ಉಪನ್ಯಾಸಗಳು, ಸಾಂಸ್ಕೃತಿಕ ಮುಖವಾಗಿ ಸಂಗೀತ, ನೃತ್ಯಗಳು, ನೇಗಿಲಯೋಗಿಗಳ ಸಲುವಾಗಿ ಕೃಷಿ ವಸ್ತುಪ್ರದರ್ಶನ, ಜಾನುವಾರು ಪ್ರದರ್ಶನ, ಕೈಗಾರಿಕಾ ಪ್ರಗತಿಮುಖಗಳು. 'ಉಂಡು ತೇಗಿತು ಲೋಕ ಕೊಂಡಾಡಿ ದಾಸೋಹ' ಎನ್ನುವಂತೆ ಇಡೀ ಲಕ್ಷಾಂತರ ಭಕ್ತ ಸಮುದಾಯಕ್ಕೆ ಅನ್ನದಾಸೋಹ ವ್ಯವಸ್ಥೆ' 'ಸಿದ್ಧಗಂಗಾಜಾತ್ರೆ' ಯ ವೈಶಿಷ್ಟ್ಯ. ಈ ವರ್ಷ ದಿನಾಂಕ ೨೪-೦೨-೨೦೧೧ ರಿಂದ ೦೫-೦೩-೨೦೧೧ರವರೆಗೆ ನಡೆಯುತ್ತದೆ.

–ಸಂಪಾದಕ





## ಮಾತು

ಸ್ಥಾನಮಾನವರಿತು ಮಾತನಾಡಬೇಕು. ನಡೆದುಕೊಳ್ಳಬೇಕು. ಚಿಂತನೆಗಳಿರಬೇಕು. ಮಾತು ಮನದ ಪ್ರತಿಬಿಂಬ. ಸಾರ್ವಜನಿಕ ಕ್ಷೇತ್ರಗಳಲ್ಲಿರುವವರಂತೂ ಮೈಯೆಲ್ಲಾ ಎಚ್ಚರವಾಗಿರುವುದು ಅವಶ್ಯ. 'ಮಾತು ಆಡಿದರೆ ಹೋಯ್ತು ಮುತ್ತು ಒಡೆದರೆ ಹೋಯ್ತು' ಎನ್ನುತ್ತದೆ ಗಾದೆ. ಗಾದೆ ವೇದಕ್ಕೆ ಸಮನಾದುದು ಎನ್ನುತ್ತಾರೆ ಪ್ರಾಜ್ಞರು. ಮಾತು ಕನ್ನಡಿ ಇದ್ದ ಹಾಗೆ. 'ಎಸ್ತ ಕನ್ನಡಿ ಹರಳು ಬೆಸ್ತು ಕೂಡೀತೇನ' ಎನ್ನುವುದುಂಟು. ಮಾತಿನ ಮೇಲೆ ನಿಗಾ ಇರಬೇಕು. ಆವೇಶ ಆವೇಗ ಆತುರಗಳಿಂದ ಆಡಿದ ಮಾತು ಅವಾಂತರಕ್ಕೆ ದಾರಿ ಮಾಡಿಕೊಡುತ್ತದೆ.

ಇತ್ತೀಚಿನ ದಿನಗಳಲ್ಲಿ ಎತ್ತರದ ಸ್ಥಾನದಲ್ಲಿ ಕುಳಿತಿರುವವರು ತಮ್ಮ ಸ್ಥಾನದ ಗೌರವನ್ನುಳಿಸಿಕೊಂಡು ಮಾತಾಡುವುದು ಕಾಣಬರುತ್ತಿಲ್ಲ. ಇದು ದುರ್ದೈವ. ಯಾರಿಗೆ ಯಾರೂ ಕಡಿಮೆ ಇಲ್ಲವೆನ್ನುವಂತೆ ಮಾತನಾಡುತ್ತಿದ್ದಾರೆ. ದೊಡ್ಡವರೆನಿಸಿಕೊಂಡವರ, ನಾಯಕರಾದವರ, ಮುಖಂಡರ, ಓದಿಕೊಂಡವರ, ಆಡಳಿತ ಸೂತ್ರಗಳನ್ನು ಕೈ ಹಿಡಿದವರ ಮಾತುಗಳು ತೂಕ ತಪ್ಪುತ್ತಿರುವುದು ಒಳ್ಳೆಯದೆನಿಸುವುದಿಲ್ಲ. 'ಬಯ್ದವರ ಬಂಧು'ಗಳೆನ್ನುತ್ತಾರೆ ಭಗವಾನ್ ಬಸವಣ್ಣನವರು. 'ನಿಂದಕರಿರಬೇಕು ಕೇರಿಯೊಳಗೆ' ಎನ್ನುತ್ತಾರೆ ಪುರಂದರದಾಸವರೇಣ್ಯರು. ಮಾತು ಮುತ್ತು, ಮಾತು ಮಾಣಿಕ್ಯ, ಮಾತು ಜ್ಯೋತಿ ಎನ್ನುತ್ತಾರೆ. ಮಾತು ಮನದ ಮಲಿನವ ಕಳೆವುದಾಗಿರಬೇಕು. ಮಾತು ಸ್ಥಾನದ ಮಾನವನ್ನು ಕಡಿಮೆಮಾಡುವಂತಿರಬಾರದು.

ಸಿರಿವಂತರಿಗಿಂತ, ಬಲವಂತರಿಗಿಂತ, ಧನಾಢ್ಯರಿಗಿಂತ, ಜನಬಲರಿಗಿಂತ, ಶಕ್ತಿವಂತರಿಗಿಂತ, ಮಾನವಂತರು ಶ್ರೇಷ್ಠ ಎಂಬುದು ಮನಗಂಡ ಮಾತು– 'ಅಡಕೆ ಕದ್ದ ಮಾನ ಆನೆ ಕೊಟ್ಟರೆ ಹೋಯಿತೇ'? ಎಂಬ ಹಳ್ಳಿಗರ ಮಾತಿನಲ್ಲಿ ಮಾನ ದೊಡ್ಡದು ಎಂಬುದು ತಿಳಿಯುತ್ತದೆ. ಮಾನವಂತರಿಂದ ಸ್ಥಾನಕ್ಕೂ ಮಾನ ಬರುತ್ತದೆ. ತಾನು ಕುಳಿತಿರುವುದೆಲ್ಲಿ? ತನ್ನ ಸ್ಥಾನ ಎಂಥದು? ತನ್ನ ನುಡಿ ನಡೆ ಹೇಗಿರಬೇಕು? ಎಂಬ ಎಚ್ಚರವಿರಬೇಕು. ರಾಜ್ಯವಾಳುವವರಾಗಿರಲಿ ರಾಗಿ ಬೀಸುವವರಾಗಿರಲಿ ಮಾತು ತೂಕತಪ್ಪದಂತಿದ್ದಾಗಲೇ ಗೌರವ.



## ಶ್ರೀ ಸಿದ್ಧಲಿಂಗೇಶ್ವರ ವಚನ

ನಿರವಯ ನಿರಾಮಯಂ ನಿರಾಕುಳಂ
ನಿರ್ದ್ವಂದ್ವ ನಿರ್ಮಳ ನಿಜಸ್ವರೂಪಂ
ನಿರ್ಭಾವ ನಿಃಪುರುಷ ನಿರಂಜನ ನಿರಾಕಾರಂ
ನಿರಾವರಣ ನಿರುಪಮ ನಿರ್ಗುಣ ನಿರಾಧಾರ ನಿರಾಲಂಬಂ
ಸರ್ವಾಧಾರ ಸದಾಶಿವಂ ಅತ್ಯತಿಷ್ಠದ್ದಶಾಂಗುಲಂ
ನಿತ್ಯನಿಶ್ಚಿಂತಂ
ನಿರ್ಮಲ ನಿರ್ಮಾಯ ನಿರಾಳಕಂ
ಹರಹರಾ ಶಿವಶಿವಾ ಜಯ ಜಯತು
ಶರಣ ಕರುಣಾಕರ ತ್ರಾಹಿ ಮಾಂ ಭಕ್ತವತ್ಸಲ
ಮತ್ಪ್ರಾಣನಾಥ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ : ಎಸ್. ಶಿವಣ್ಣ, ಸಂಕೀರ್ಣದ ವಚನ ಸಂಪುಟ 6 – ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕರಸ್ಥಲದ ಲಿಂಗವ ದಾಸೋಹಕಣಿಗೈವ
ದಾಸೋಹ ಲಿಂಗವಾಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹದೆತ್ತರವ ಜಗಕೆಲ್ಲ ಬಿತ್ತರಿಪ
ಬಸವಸಾಕಾರವೆ ಎಂದೆನಿಪ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಷ್ಠೆ ಪ್ರಸಾದದಲಿ ನಿಷ್ಠೆ ಸಮಯದಲಿ
ನಿಷ್ಠೆ ದಾಸೋಹ ಮಣಿಹದಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣರ ಘನವ ತನುಮನಭಾವದೊಳು
ಅರಳು ಮಲ್ಲಿಗೆಯಾಗಿ ಅರಳಿಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹತ್ತುಸಾವಿರ ಪದವ ಎತ್ತಿ ಹಾಡಿದರೇನು ?
ಮುತ್ತು ನಿನ್ನ ನುಡಿಗೆ ಸರಿಯಹುದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ನಿಮ್ಮ ಸುಳುಹಿನ ಸೊಗಸನುಪಮಿಸಬಾರದು'
ನಿಮ್ಮ ದಾಸೋಹದ ವೈಭವವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಮಾತಿನ ಮಾಲೆಗೆ ನಿಲುಕದ ಶ್ರೀನಿಲವೆ'
ತರ್ಕದ ಹೋರಟೆಗೆ ಮೀರಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಹಗೆಯಲ್ಲನಿಂದಕಗೆ ಕೆಳೆಯಲ್ಲ ಹೊಗಳಿಪಗೆ'
ಭಾವಗೋಚರ ಶಿವಸುಂದರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸ್ವಾನುಭಾವದ ಸಿರಿಯೆ ಸ್ವಾತ್ಮಚಿಂತನ ದೊರೆಯೆ
ಸ್ವಾರ್ಥಶೂನ್ಯವೆನಿಸಿದ ಶಿವನಿಜವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನಿರ್ದ ಕ್ಷೇತ್ರವೆ ಅವಿಮುಕ್ತಕ್ಷೇತ್ರವು
ನೀನಿರ್ದ ದೇಶವೆ ಪಾವನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## 'ಶಿವ ಮಹದೇವನಾದ' *

–ಶಕುಂತಲಾ ಯು.



ಶಿವಪೂಜೆ, ಬಿಲ್ವಪತ್ರೆ, ಅರ್ಚನೆ, ಉಪವಾಸ, ಅಭಿಷೇಕ, ಜಾಗರಣೆ ಈ ಐದು ಪವಿತ್ರ ಕಾರ್ಯಗಳ ಮಹಾಸಂಗಮದ ದಿನ ಶಿವರಾತ್ರಿ.

ಶಿವರಾತ್ರಿ ಪರ್ವದ ಮಹತ್ವವನ್ನು ಮೂರು ದೃಷ್ಟಿಗಳಿಂದ ನೋಡಬಹುದು. ಸಕಲವೆಲ್ಲವೂ ಲಿಂಗದಲ್ಲಿ ಅಡಗಿರುವುದರಿಂದ ಶಿವನನ್ನು ಲಿಂಗರೂಪದಲ್ಲಿ ಪೂಜಿಸುವುದು ಒಂದಂಶ. ಎರಡನೆಯ ಅಂಶ ಎಂದರೆ, ಶಿವನು ನೀಲಕಂಠನಾದ ದಿನ. ಮೂರನೆಯ ಅಂಶ ಎಂದರೆ, ಶಿವನು ನಟರಾಜನಾಗಿ ತಾಂಡವನೃತ್ಯ ಮಾಡಿದ ದಿನ.

ಶಿವ ಬಿಲ್ವಪತ್ರ ಪ್ರಿಯ. ಒಂದು ಜನಜನಿತ ಕಥೆಯ ಪ್ರಕಾರ ಅಜ್ಞಾನಿ, ಪಾಪಾತ್ಮನಾದ ಬೇಡನು, ಬೇಟೆ ಸಿಗದೆ ಹಸಿದು, ರಾತ್ರಿ ಕೊಳದ ಬಳಿ ವೃಕ್ಷವನ್ನೇರಿ ನೀರು ಕುಡಿಯಲು ಬರುವ ಪ್ರಾಣಿಗೆ ಹೊಂಚು ಹಾಕುತ್ತ ಕುಳಿತಿದ್ದ. ಮರದ ಕೆಳಗೆ ಶಿವಲಿಂಗ ಇರುವುದು ಅವನಿಗೆ ತಿಳಿದಿಲ್ಲ. ತನಗೆ ಅರಿವು ಇಲ್ಲದಂತೆ ತನ್ನ ಕಣ್ಣಿಗೆ ಅಡ್ಡವಿದ್ದ ಬಿಲ್ವಪತ್ರೆಯನ್ನು ಕಿತ್ತು ಬಿಸಾಡುತ್ತಿದ್ದ. ಅವು ಲಿಂಗದ ಮೇಲೆ ಬೀಳುತ್ತಿದ್ದವು. ಅಂದು ಶಿವರಾತ್ರಿಯ ದಿನ. ಶಿವ ಆ ಬೇಡನ ಭಕ್ತಿಗೆ ಮೆಚ್ಚಿ ಬೆಳಗಿನ ಜಾವದ ವೇಳೆಗೆ ಬೇಟೆಯನ್ನು ಕಳಿಸಿದ. ಬೇಡ ಅದನ್ನು ಸ್ವೀಕರಿಸಿದ ಎಂದು ಒಂದು ಕಥೆ ಇದ್ದರೆ ಬೇಡ ರಾತ್ರಿ ಬಿಲ್ವವೃಕ್ಷದ ಮೇಲೆ ಕುಳಿತು ತನ್ನ ದೃಷ್ಟಿಗೆ ಅಡ್ಡವಿದ್ದ ಎಲೆಗಳನ್ನು ಕಿತ್ತೆಸೆಯಲು ಕೆಳಗಿನ ಶಿವಲಿಂಗದ ಮೇಲೆ ಬಿದ್ದವು. ಆ ರಾತ್ರಿ ಮೂರು ಜಿಂಕೆಗಳು ಬಂದು ನನ್ನನ್ನು ಕೊಲ್ಲಬೇಡ, ಬೆಳಗಿನ ಜಾವ ಬರುತ್ತೇವೆ ಎಂದು, ಕೊಟ್ಟ ಭಾಷೆಗೆ ತಪ್ಪದೆ ಪ್ರಾಣಾರ್ಪಣೆ ಮಾಡಿದವು. ಆದರೆ ಬೇಡನ ಮನಃಪರಿವರ್ತನವಾಗಿತ್ತು. ಬೇಡನಿಗೆ ತನಗರಿವಿಲ್ಲದಂತೆ, ಉಪವಾಸ, ಜಾಗರಣೆ, ಲಿಂಗಾರ್ಚನೆ ಎಲ್ಲವೂ ನಡೆದಿದ್ದವು. ಶಿವ ಸಂಪ್ರೀತನಾಗಿ ಬೇಡನನ್ನು ಮತ್ತು ಆ ಜಿಂಕೆಗಳನ್ನು ಕೈಲಾಸಕ್ಕೆ ಬರಮಾಡಿಕೊಂಡನು. ಹೀಗೆ ಶಿವನಿಗೆ ಬಿಲ್ವಪತ್ರದಿಂದ ಅರ್ಪಿಸಿದರೆ ಸುಪ್ರೀತನಾಗುವನು ಎಂದು ತಿಳಿಯುತ್ತದೆ.

ಉಪವಾಸ ಎಂದರೆ ಹತ್ತಿರವಾಸ ಎಂದು. ನಮ್ಮ ಮನಸ್ಸು ಬುದ್ಧಿಯಿಂದ ಏಕಾಗ್ರಚಿತ್ತನಾಗಿ ಭಗವಂತನ ಸಮೀಪ ಇರುವುದು. ಇಂದ್ರಿಯ ಸಂಯಮ, ಶ್ರದ್ಧೆ ವಿಶ್ವಾಸದಿಂದ ಧ್ಯಾನ ಪೂಜೆ ಸ್ತುತಿ ಸ್ತೋತ್ರಗಳಿಂದ ಶಿವನನ್ನು ಧ್ಯಾನಿಸಬೇಕು. ನಮ್ಮ ಶರೀರ ಒಂದೆಡೆ ಇದ್ದರೆ ಮನಸ್ಸು ಇನ್ನೊಂದೆಡೆ ಇರುತ್ತದೆ. ಇದರ ಬದಲಾಗಿ ಪರಮಾತ್ಮನ ಮಧುರ ನೆನಪಿನಲ್ಲಿ ಆತ್ಮಶಾಂತಿಯನ್ನು ಅನುಭವಿಸಲಿ. ನಮ್ಮಲ್ಲಿರುವ ಅಶುದ್ಧತೆಯನ್ನು ಹೋಗಲಾಡಿಸಿ ಪವಿತ್ರ ಆತ್ಮರಾಗಬೇಕು. ಇದರ ಜೊತೆಗೆ ಉಪವಾಸವನ್ನು ಸಂಪೂರ್ಣ ನಿರಾಹಾರದಲ್ಲಿ ಆಚರಿಸುವವರು ಇದ್ದಾರೆ. ಕೆಲವರು ದ್ರವಾಹಾರ ಮಾತ್ರ ಸೇವಿಸುವವರು. ಕೆಲವರು ಬೇಯಿಸಿದ ಆಹಾರ ಬಿಟ್ಟು ಹಣ್ಣು, ದ್ರಾಕ್ಷಿ, ಗೋಡಂಬಿ ಕಲ್ಲುಸಕ್ಕರೆ ಸೇವಿಸುತ್ತಾರೆ. ಮಹಿಳೆಯರೂ ಸಹ ಉಪವಾಸವನ್ನು ಆಚರಿಸುವರು. ಸಾತ್ವಿಕ ಆಹಾರವನ್ನು ಸೇವಿಸುವ ಉದ್ದೇಶ ಇರಬಹುದು.

ಜಾಗರಣೆ ಎಂದರೆ ಜಾಗೃತವಾಗಿರುವುದು. 'ಉತ್ತಿಷ್ಠತಾ ಜಾಗ್ರತ' ಪರಿಪೂರ್ಣನಾಗಿ ಏಳು, ಶಿವರಾತ್ರಿ ಹಬ್ಬ ಪೂರ್ಣ

* 'ಜ್ಯೋತಿರ್ಲಿಂಗ', ಮೊದಲನೇ ಒಳಬೀದಿ, ಹೈಸ್ಕೂಲ್ ಬಡಾವಣೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ.

ರಾಗುವ ಕಡೆಗೆ ಸಾಗುವುದು. ಜಾಗರಣೆ ಎಂದರೆ ರಾತ್ರಿಯನ್ನು ಅರಿವಿನಲ್ಲಿ ಕಳೆಯುವುದು. ಅಸುರೀ ಪ್ರವೃತ್ತಿಗಳು ಅಜ್ಞಾನದ ನಿದ್ರೆಯಲ್ಲಿ ಪ್ರವೇಶಿಸದಂತೆ ಜಾಗೃತನಾಗಿರುವುದು ಜಾಗರಣೆಯ ಉದ್ದೇಶ. ವಿಕಾರಗಳು ನಮ್ಮ ಮನಸ್ಸು ಪ್ರವೇಶಿಸದಿರಲಿ. ನಮ್ಮ ಮೇಲೆ ನಾವು ಎಚ್ಚರಿಕೆ ವಹಿಸುವುದೇ ಜಾಗರಣೆ ತಮೋ ಗುಣಗಳಿಂದ ಜಾಗೃತರಾಗಬೇಕು.

ಶಿವನು ಅಭಿಷೇಕ ಪ್ರಿಯ. ಶಿವರಾತ್ರಿಯಂದು ಲಿಂಗದ ಮೇಲೆ ಪಂಚಾಮೃತದ ಅಭಿಷೇಕವನ್ನು ಮಾಡುತ್ತಾರೆ. ಧಾರಾ ಪಾತ್ರೆಯಿಂದ ನೀರು ಹನಿಹನಿಯಾಗಿ ಬೀಳಬೇಕು. ಅಭಿಷೇಕದಿಂದ ತೃಪ್ತಿಪಡಿಸಿದಾಗ ಶಿವನು ನಮ್ಮಲ್ಲಿರುವ ಪಶುತ್ವವನ್ನು ನಿವಾರಿಸುತ್ತಾನೆ. ನಮ್ಮ ಜೀವನ ಪ್ರಾರಂಭವಾಗುವುದೇ ಅಳುವಿನಿಂದ. ರೋದನವನ್ನು ನಿವಾರಿಸುವವನೇ ರುದ್ರ. 'ಸರ್ವೇ ವೈರುದ್ರಃ ತಸ್ಮೈರುದ್ರಾಯ ನಮೋ ಅಸ್ತು' ಅಂದರೆ ಪ್ರಪಂಚದಲ್ಲಿರುವ ಸಕಲ ವಸ್ತುಗಳೂ ರುದ್ರಾಂಶ ಆಗಿರುವುದರಿಂದ ಅವೆಲ್ಲಕ್ಕೆ ವಂದಿಸಿ, ನಮಗಾಗಿ ಒಳ್ಳೆಯದನ್ನು ಮಾಡಲಿ. ಪ್ರಾರ್ಥನೆಯು ವ್ಯಷ್ಟಿಯಿಂದ ಸಮಷ್ಟಿಯತ್ತ ಸಾಗಿ ಇಡೀ ಲೋಕ ಕಲ್ಯಾಣಕ್ಕೆ ನಾಂದಿಯಾಗಬೇಕು.

ಶಿವಾರಾಧನೆಗೆ ಆಡಂಬರ ಬೇಕಿಲ್ಲ. ಬೆಟ್ಟದಪತ್ರೆ, ಬಾವಿಯ ನೀರು, ನಿರ್ಮಲಭಕ್ತಿ-ಭಾವನೆ ಆದರೆ ಸಾಕು. ಹೀಗೆ ಮಹಾಶಿವರಾತ್ರಿ ಜಾತಿ-ಮತ ಪ್ರಾಂತ್ಯ ಭೇದವಿಲ್ಲದೆ ಇಡೀ ನಾಡಿನಾದ್ಯಂತ ಆಚರಿಸುತ್ತಾರೆ. ನಮ್ಮಲ್ಲಿಯ ಪಶುತ್ವ ನಿವಾರಣೆ ಆಗಿ ಪಶುಪತಿಯತ್ತ ಸಾಗಲು ಶಿವರಾತ್ರಿ ಪೂರಕ. ಜೀವನದಲ್ಲಿ ಎದುರಾಗುವ ದ್ವಂದ್ವಗಳನ್ನು ನಿವಾರಿಸಿ ಸಮ ಭಾವದ ಆದರ್ಶ ದೈವ ಮಂಗಳಮೂರ್ತಿಯಾದ ಶಿವ. ಅದಕ್ಕೆ ಅವನು ಮಹಾದೇವ. ❑

## ರುದ್ರಾಕ್ಷಿ ಸೇವೆ

ಶ್ರೀ ಬಸವರಾಜ ಶಿರಗುಪ್ಪಿ ಹುಬ್ಬಳ್ಳಿಯಿಂದ ಶ್ರೀಮಠಕ್ಕೆ ದಿನಾಂಕ ೧೪-೦೧-೨೦೧೧ರಂದು ಆಗಮಿಸಿದರು. ವೃತ್ತಿಯಲ್ಲಿ ಕೆ.ಎಸ್.ಆರ್.ಟಿ.ಸಿ. ಯಲ್ಲಿ ವರ್ಕ್‌ಶಾಪಿನ ಕಾರ್ಯಾಚಾರಿ ಗಳು. ನಿವೃತ್ತಿಯ ನಂತರ ಬಂದ ವಿಶ್ರಾಂತಿ ವೇತನವನ್ನು ಸಾರ್ಥಕ ಸದ್ವಿನಿಯೋಗ ಯೋಜನೆಗೆ ಬಳಸಲಾರಂಭಿ ಸಿದರು. ನಿವೃತ್ತಿಯಿಂದ ಬಂದ ನಿಧಿಯಿಂದ ಮನೆ ಕೊಳ್ಳಲಿಲ್ಲ, ಹೊಲ ಕೊಳ್ಳಲಿಲ್ಲ, ಬ್ಯಾಂಕಿನಲ್ಲಿ ಹಣವನ್ನು ನಿಶ್ಚಿತ ನಿಧಿಯನ್ನಾಗಿಡ ಬಯಸಲಿಲ್ಲ. ರುದ್ರಾಕ್ಷಿಗಳನ್ನು ಕೊಳ್ಳುತ್ತಾ ಬಂದರು. ಅದೂ ಒಂದಲ್ಲ, ಎರಡಲ್ಲ, ಸಾವಿರ ಸಾವಿರ ರುದ್ರಾಕ್ಷಿಗಳನ್ನು. ಅವುಗಳನ್ನು ಮಾಲೆ ಕಟ್ಟಿದರು. ಧಾರಣಾಕಾಂಕ್ಷಿಗಳಿಗೆ, ಅರ್ಪಿಸುತ್ತಾ ನಡೆದರು. ಆನಂದವನ್ನನುಭವಿಸುತ್ತಾ ಸಾಗಿದರು. ಏನು ಅನ್ನಿಸಿತೋ ಅವರಿಗೆ? ಶ್ರೀಮಠದತ್ತ ಮುಖ ಮಾಡಿದರು. ಬಂದರು. ಪರಮಪೂಜ್ಯರನ್ನು ದರ್ಶಿಸಿದರು. ಪಾದ ಮುಟ್ಟಿ ಧನ್ಯತೆಯನ್ನುಭವಿಸಿದರು. ಮಠದಲ್ಲಿ ಪ್ರಸಾದ ಸ್ವೀಕರಿಸಿದರು. ತಾವು ತಂದಿದ್ದ ರುದ್ರಾಕ್ಷಿಗಳಿಂದ ಬೃಹತ್ ಪ್ರಮಾಣದ ಹಾರ ಪೋಣಿಸಿದರು. ೭೫ ಸಾವಿರ ರುದ್ರಾಕ್ಷಿಗಳ ಹಾರ ಸಿದ್ಧವಾಯಿತು. ಅದರ ಜೊತೆಗೆ ಆಳೆತ್ತರ ಪ್ರಮಾಣದ ನೂರಾರು ಹಾರ ಕಟ್ಟಿದರು. ಅವುಗಳನ್ನೆಲ್ಲ ಶ್ರೀಮಠದ ಸಂಸ್ಕೃತ ಕಾಲೇಜಿನ ಮುಂದೆ ಪ್ರದರ್ಶನಕ್ಕೆ ಇಟ್ಟರು. ಪೂಜಿಸಿದರು. ಭಕ್ತಾದಿಗಳಿಗೆ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತೆ, ಬಿಟ್ಟ ಕಣ್ ಮುಚ್ಚದಂತೆ ನೋಡುವ 'ಪವಿತ್ರ ನೋಟ' ಉಂಟು ಮಾಡಿದರು.

೧೫-೦೧-೨೦೧೧ರಂದು ಲಿಂಗೈಕ್ಯ ಪರಮಪೂಜ್ಯ ಶ್ರೀ ಶ್ರೀ ಅಟವೀಸ್ವಾಮಿಗಳ ಮತ್ತು ಪರಮಪೂಜ್ಯ ಶ್ರೀ ಶ್ರೀ ಉದ್ದಾನಮಹಾಸ್ವಾಮಿಗಳ ಪುಣ್ಯ ಸ್ಮರಣಾ ಸಮಾರಂಭದಲ್ಲಿ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರಿಗೆ ಸುಮಾರು ಆರು ಅಡಿ ಉದ್ದದ ರುದ್ರಾಕ್ಷಿ ಮಾಲಾರ್ಪಣೆ ಮಾಡಿದುದರ ಜೊತೆಗೆ ವೇದಿಕೆ ಮೇಲಿದ್ದ ಎಲ್ಲ ಶ್ರೀಗಳವರಿಗೆ, ಆಹ್ವಾನಿತ ಅತಿಥಿ ಗಣ್ಯಮಾನ್ಯರಿಗೆ ಸುಂದರವಾಗಿ ಕಟ್ಟಿದ್ದ ರುದ್ರಾಕ್ಷಿಹಾರಗಳನ್ನು ಅರ್ಪಿಸಿ ಧನ್ಯತೆಯನ್ನು ಅನುಭವಿಸಿದರು. ತಾವಿರುವ ತನಕ ಜೀವನದುದ್ದಕ್ಕೂ ರುದ್ರಾಕ್ಷಿ ಸೇವೆಯನ್ನು ಮುನ್ನಡೆಸಿಕೊಂಡು ಹೋಗುವ ಸಂಕಲ್ಪ ಮುಖಿಗಳಾದ ಶ್ರೀ ಬಸವರಾಜ ಶಿರಗುಪ್ಪಿ ಅವರು ನಮ್ರಭಾವದ 'ಎನಗಿಂತ ಕಿರಿಯರಿಲ್ಲ' ಎಂಬ ಬಸವವಾಣಿಯ ಸದ್ಭಾವದ ಸುಸಂಸ್ಕೃತರು ಶ್ರೀ ಶಿರಗುಪ್ಪಿ ಬಂಧುಗಳಿಗೆ 'ಸಿದ್ಧಗಂಗಾ' ಅಭಿನಂದನೆಯನ್ನು ಸಲ್ಲಿಸಲು ಸಂತೋಷಿಸುತ್ತದೆ.





## ಜಾತ್ರೆಗಳು – ಪರಿಕಲ್ಪನೆ, ಉದ್ದೇಶಗಳು *

-ಟಿ.ಆರ್. ಮಹಾದೇವಯ್ಯ

ಜಾತ್ರೆ, ಪರಿಷೆಗಳು ಯಾವುದೇ ನಾಡಿನ ಜನಪದ ಬದುಕಿನ ಅವಿಭಾಜ್ಯ ಅಂಗಗಳು. ಅವು ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಆಯಾಮಗಳನ್ನು ಹೊಂದಿದ ಸಾಂಸ್ಕೃತಿಕ ಕಾರ್ಯಕ್ರಮಗಳು. ಜನಮನಕ್ಕೆ ಮುದ ನೀಡುವ ರಸೋಲ್ಲಾಸಕಾರೀ ಆಚರಣೆಗಳು. ದೇವರ ರಥೋತ್ಸವವೇ ಮೊದಲಾದ ವಿಶೇಷ ಆಚರಣೆ ಮತ್ತು ಅಂಥ ಸಂದರ್ಭದಲ್ಲಿ ಸೇರುವ ಜನಸಮುದಾಯಕ್ಕೆ ಜಾತ್ರೆ ಎನ್ನುವರು. 'ಜಾತ್ರೆ' ಪದವು ಸಂಸ್ಕೃತದ 'ಯಾತ್ರಾ' ದಿಂದ ಬಂದದ್ದು. ಇದಕ್ಕೆ ಪರಿಷೆ ಎಂದೂ ಕರೆಯುತ್ತಾರೆ. ಯಾವುದೇ ಜಾತ್ರೆ ಅದು ನಡೆಯುವ ಊರಿನ ಹೆಸರಿನಲ್ಲಿ ಅಥವಾ ಉತ್ಸವ ನಡೆಯುವ ದೇವರ ಹೆಸರಿನಲ್ಲಿ ಕರೆಯಲ್ಪಡುತ್ತದೆ.

ಸಂತೆ ಮತ್ತು ಜಾತ್ರೆ ಎರಡರಲ್ಲೂ ಜನ ಸೇರುತ್ತಾರೆ. ಆದರೆ ಉದ್ದೇಶ ಮಾತ್ರ ಬೇರೆ ಬೇರೆ. ಸಂತೆಗಳು ವ್ಯಾಪಾರ-ವ್ಯವಹಾರಕ್ಕೆ. ಜಾತ್ರೆಗಳನ್ನು ವ್ಯಾಪಾರವಿದ್ದರೂ ಅದಕ್ಕೆ ಧಾರ್ಮಿಕ ಹಿನ್ನಲೆಯಿರುತ್ತದೆ. ಸಂತೆ ವಾರಕ್ಕೊಮ್ಮೆ ಸೇರಿದರೆ, ಜಾತ್ರೆ ವರ್ಷಕ್ಕೊಮ್ಮೆ ಏರ್ಪಾಡಾಗುತ್ತದೆ. ಒಂದು ಪೂರಾ ಲೌಕಿಕ. ಇನ್ನೊಂದು ಪಾರಮಾರ್ಥಿಕ. ಜಾತ್ರೆಗಳು ಪಾರಮಾರ್ಥಿಕದ ಜೊತೆಗೆ ವ್ಯಾಪಾರ ವಹಿವಾಟಿಗೂ ಅವಕಾಶ ನೀಡುತ್ತವೆಯಾಗಿ ಮತ್ತಷ್ಟು ಜನಪ್ರಿಯವಾಗುತ್ತಿವೆ. ಜನಜೀವನದ ಮೇಲೆ ಅವುಗಳ ಪ್ರಭಾವ ದೊಡ್ಡದು.

ಗ್ರಾಮಾಂತರ ಪ್ರದೇಶದ ಜನರು ಶ್ರಮಜೀವಿಗಳು, ಕಾಯಕದ ಕಲಿಗಳು. ವರ್ಷದುದ್ದಕ್ಕೂ ಕಾಯಕಷ್ಟದ ದುಡಿಮೆ ಯಲ್ಲಿ ತೊಡಗಿರುತ್ತಾರೆ. ಆಗಾಗ್ಗೆ ಬರುವ ಹಬ್ಬ ಹರಿದಿನ ಗಳು ಅವರ ಬದುಕಿನ ಏಕತಾನತೆಯ ನಲಿವಿನ ವಾತಾವರಣ ಮೂಡಿಸುತ್ತವೆಯಾದರೂ ವರ್ಷಕ್ಕೊಮ್ಮೆ ನಿಯತಕಾಲದಲ್ಲಿ ಜರುಗುವ ಜಾತ್ರೆಗಳು ಅವರಿಗೆ ಹೆಚ್ಚಿನ ಆನಂದವನ್ನು ಒದಗಿಸುತ್ತವೆ.

ಸಾಮಾನ್ಯವಾಗಿ ಜಾತ್ರೆಗಳು ಸುಗ್ಗಿಯ ನಂತರ ಬೇಸಿಗೆ ಯಲ್ಲಿ ನಡೆಯುತ್ತವೆ. ಕಷ್ಟಪಟ್ಟು ಬೆಳೆದ ಪೈರೆಲ್ಲಾ ಕಟಾವಾಗಿ ಕಣದ ಕೆಲಸ ಮುಗಿದು ದವಸ ಧಾನ್ಯಗಳು ಮನೆ ಸೇರಿದ ಮೇಲೆ ರೈತರಿಗೆ ಸ್ವಲ್ಪ ಬಿಡುವು. ನಿರಂತರ ಧುಡಿಮೆಯ ಯಾಂತ್ರಿಕ ಬದುಕಿನಲ್ಲಿ ರೈತರ ದಣಿಯನ್ನು ಮರೆಸುವ ಇಂಥ ಸಾಂಸ್ಕೃತಿಕ ಉತ್ಸವದ ಪರಿಕಲ್ಪನೆಯನ್ನು ನಮ್ಮ ಪೂರ್ವಕರು ಮಾಡಿದ್ದು ಒಂದು ಅಮೃತ ಘಳಿಗೆ !

ಕಾಲ ಕಳೆದಂತೆ ಜಾತ್ರೆಗಳು ಸಂಕೀರ್ಣ ಸ್ವರೂಪವಾದವು. ಅವುಗಳ ಉದ್ದೇಶಗಳು ಬೆಳೆದವು. ಅವು ಜನಸಾಮಾನ್ಯರ ಸೇವಾಕೇಂದ್ರಗಳಾದುದು ಒಳ್ಳೆಯ ಬೆಳವಣಿಗೆ.

ಜನರೆಲ್ಲಾ ಒಂದು ಕಡೆ ಸೇರುವುದು ಮುಖ್ಯ. ತಮ್ಮಲ್ಲಿರುವ ತರತಮಗಳನ್ನು ಬಿಟ್ಟು, ತಮ್ಮಲ್ಲಿನ ದ್ವೇಷಾಸೂಯೆಗಳನ್ನು ಮರೆತು ಒಗ್ಗೂಡಿ ಜನ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಅವರಿಗೆ ಅದೊಂದು ಪವಿತ್ರ ಸೇವಾ ಕಾರ್ಯ. ದೇವರ ಜಾತ್ರೆಯು ಪವಿತ್ರವೆನ್ನುವ ಭಾವನೆ ಜನಮನದಲ್ಲಿ ಬೇರೂರಿದೆ. ನಿಜ, ಅದ್ಭುತ ಪರಿವರ್ತನೆಯನ್ನು ತರುವ ಶಕ್ತಿ ಈ ಸಾಮೂದಾಯಿಕ ಆಚರಣೆಯಲ್ಲಿದೆ.

ಜನರು ತಮ್ಮ ಅಭಿರುಚಿ ಮತ್ತು ದರದುಗಳಿಗೆ ತಕ್ಕಂಥ ಉದ್ದೇಶವಿಟ್ಟುಕೊಂಡು ಜಾತ್ರೆಗೆ ಬರುತ್ತಾರೆ. ದೇವರಿಗೆ ಪೂಜೆ ಮಾಡಿಸಿ ಹರಕೆ ತೀರಿಸುವುದು, ಜಾತ್ರೆಯ ವಿವಿಧ ಉತ್ಸವಗಳಲ್ಲಿ ಭಾಗಿಯಾಗಿ ಭಕ್ತಿ ಸಮರ್ಪಿಸುವುದು, ದಾಸೋಹ ಕೈಂಕರ್ಯದಲ್ಲಿ ಸೇವೆ ಸಲ್ಲಿಸುವುದು; ಮನರಂಜನಾ ಕಾರ್ಯಕ್ರಮಗಳಲ್ಲಿ ಭಾಗಿಯಾಗಿ ಬೇಸರ ನೀಗಿಕೊಳ್ಳುವುದು; ಸ್ವಯಂ ಕಲಾವಿದನಾಗಿದ್ದರೆ ತನ್ನ ಕಲಾ ಪ್ರದರ್ಶನಕ್ಕೆ ಅವಕಾಶ ಕಂಡುಕೊಳ್ಳುವುದು ಇತ್ಯಾದಿ.

ಅದಲ್ಲದೆ ತಾನು ಬೆಳೆದ ಹಣ್ಣುಹಂಪಲು, ತಕಕಾರಿಗಳನ್ನು ತಂದಿಟ್ಟು ವ್ಯಾಪಾರ ಮಾಡುವುದು. ತನಗೆ ಬೇಕಾದ ವಸ್ತುಗಳನ್ನು ಖರೀದಿ ಮಾಡುವುದು, ಬೇರೆಡೆಯಿಂದ ಬಂದ ಬಂಧುಗಳನ್ನು, ಮಿತ್ರರನ್ನು ಭೇಟಿ ಮಾಡುವುದು ಇತ್ಯಾದಿ. ಇದರಿಂದಾಗಿ ವ್ಯಕ್ತಿ-ವ್ಯಕ್ತಿ ಸಂಬಂಧಗಳು, ಊರು ಊರಿನ ಸಂಬಂಧಗಳು ನಿಕಟವಾಗುತ್ತದೆ; ಮಧುರ ವಾಗುತ್ತವೆ. ದನದ ಜಾತ್ರೆಯಾದರಂತೂ ತನ್ನವನ್ನು ಮಾರುವ ಅಥವಾ

* ನಂ. ೧೩೬, ೧ನೇ ಮುಖ್ಯರಸ್ತೆ, ೧ನೇ ಬ್ಲಾಕ್, ನಾಗರಬಾವಿ ೨ನೇ ಹಂತ, ಬೆಂಗಳೂರು -೫೬೦ ೦೭೨.

ತನಗೆ ಬೇಕಾದ ರಾಸುಗಳನ್ನು ಕೊಳ್ಳುವ ವ್ಯವಹಾರವೂ ಇರುತ್ತದೆ. ಚೆನ್ನಾಗಿ ಸಾಕಿದ ರಾಸುಗಳಿಗೆ ಮೆಚ್ಚುಗೆಯ ಪಾರಿತೋಷಕಗಳನ್ನು ಗಳಿಸುವ ಯೋಗವೂ ಅಲ್ಲಿ ಉಂಟು.

ಜಾತ್ರೆಗಳಿಂದ ಆಗುವ ಇಂಥ ಪ್ರಯೋಜನಗಳಿಂದಲೇ ಪ್ರಪಂಚದ ನಾನಾ ಕಡೆ ಜಾತ್ರೆಗಳು ನಡೆಯುತ್ತವೆ. ಈ ಬಗ್ಗೆ ಸಾಕಷ್ಟು ಉಲ್ಲೇಖಗಳು ನಮಗೆ ದೊರಕುತ್ತವೆ. ಭಾರತದಲ್ಲಿ ಜಾತ್ರೆಗಳ ಸಂಖ್ಯೆ ಜಾಸ್ತಿ. ಅವು ಪ್ರಾಚೀನ ಕಾಲದಿಂದಲೂ ಸಾಗಿ ಬಂದಿವೆ. ನಮ್ಮ ಕಾವ್ಯಗಳಲ್ಲಿ, ಶಾಸನಗಳಲ್ಲಿ ಜಾತ್ರೆಗಳ ಉಲ್ಲೇಖಗಳು ಸಿಕ್ಕುತ್ತವೆ. ಸಾಮುದಾಯಿಕ ಬದುಕನ್ನು ರೂಪಿಸುವ ಪ್ರಬಲ ಸಾಧನವಾಗಿ ಅವು ಬೆಳೆದು ಬಂದಿವೆ. ಜಾತ್ರೆಗಳ ಆಚರಣೆಯಲ್ಲಿ ಧಾರ್ಮಿಕ, ಶೈಕ್ಷಣಿಕ ಹಾಗೂ ಸಂಸ್ಕೃತಿ ಮೌಲ್ಯಗಳಿವೆ.

ಜಾತ್ರೆಗಳು ಜರುಗುವ ಕ್ಷೇತ್ರದ ಅಧಿದೈವದ ಬಗ್ಗೆ ಸ್ಥಳ ಪುರಾಣಗಳಿರುತ್ತವೆ. ಜಾನಪದ ಕಥೆಗಳಿರುತ್ತವೆ. ಆ ದೈವದ ಬಗ್ಗೆ, ಆಚರಣೆಗಳ ಬಗ್ಗೆ ಜನಪದೀಯ ಮೌಖಿಕ ಪರಂಪರೆಯಿರುತ್ತದೆ. ಅವು ಹೊರಹೊಮ್ಮಲು ಜಾತ್ರೆಗಳು ನಡೆಯಬೇಕು. ಜನಜೀವನವನ್ನಾಳುವ ಇವು ಅಪ್ಯಾಯಮಾನವಾಗಿರುವುದಲ್ಲದೆ ಬೋಧಪ್ರದವಾಗಿರುತ್ತವೆ. ಭಕ್ತಿಪರವಶರಾದ ಜನ ದೇವನ ಶಕ್ತಿಯನ್ನು ಕುರಿತು ಹಾಡುತ್ತಾರೆ, ಕುಣಿಯುತ್ತಾರೆ. ಜನಮಾನಸದ ಸಾಹಿತ್ಯ ಕಾರಂಜಿ ಪುಟಿಯಲು ಒಳ್ಳೆಯ ಅವಕಾಶ ದೇವರ ಜಾತ್ರೆ! ದೇವರ ಸೇವೆಗೆಂದು ದೇವಸ್ಥಾನಕ್ಕೆ ಯಾವಾಗ ಬೇಕಾದರೂ ಬರಬಹುದು! ಆದರೆ ಜಾತ್ರೆ ಮಾತ್ರ ವರ್ಷಕ್ಕೊಮ್ಮೆ ಮಾತ್ರ! ಅಂತೆಯೇ ಜಾತ್ರೆಗೆ ಎಲ್ಲಿಲ್ಲದ ಪ್ರಾಶಸ್ತ್ಯ!.

ಜಾತ್ರೆಗಳ ಸುತ್ತ ಒಂದು ವಿಶಿಷ್ಟ ಸಾಂಸ್ಕೃತಿಕ ಪರಿವೇಷವಿರುತ್ತದೆ. ಜಾತಿ, ಮತ ಪಂಥ, ಪಂಗಡ, ವರ್ಣ ವರ್ಗ ಭೇದವಿಲ್ಲದೆ ಜನರು ಇದರಲ್ಲಿ ಪಾಲ್ಗೊಳ್ಳುತ್ತಾರೆ, ಕೃತಾರ್ಥ ಭಾವದಿಂದ ನಲಿದಾಡುತ್ತಾರೆ.

ಜಾತ್ರೆ ನಡೆಯುವ ಸ್ಥಳವೇ ಎಲ್ಲರ ಗಮನ ಸೆಳೆಯುವಂತಿರುತ್ತದೆ. ಸಾಮಾನ್ಯವಾಗಿ ಅಲ್ಲಿ ಒಂದು ಬೆಟ್ಟ ಅದರ ತಪ್ಪಲಲ್ಲಿ ವಿಶಾಲವಾದ ಸಮತಟ್ಟು ಪ್ರದೇಶ, ಪಕ್ಕದಲ್ಲೇ ನದಿ ಅಥವಾ ಕೆರೆ, ಕಲ್ಯಾಣಿ, ನೆರಳಿನಾಸರೆಯ ತೋಪು, ಹಚ್ಚಹಸುರಿನ ತಂಪಾದ ಸ್ಥಳ, ಇಂಥ ಕಡೆ ಜಾತ್ರೆ ಸೇರಿದರೆ ಅದರಲ್ಲೂ ದನದ ಪರಿಷೆ ಸೇರಿದರೆ ನೋಡಬೇಕು ಆ ರಮಣೀಯ ದೃಶ್ಯವನ್ನು !



ಸುತ್ತಮುತ್ತ ತಾತ್ಕಾಲಿನ ತಂಗುದಾಣಗಳು, ಅಂಗಡಿ ಮುಂಗಟ್ಟುಗಳು, ತಿಂಡಿತಿನಿಸಿನ ಹೋಟೆಲುಗಳು, ಸೌತೆಕಾಯಿ, ಕಲ್ಲಂಗಡಿ, ಕರಬೂಜದ ಹಣ್ಣಿನಂಗಡಿ, ಮಕ್ಕಳಾಟಿಕೆಯ ಹೆಣ್ಣುಮಕ್ಕಳ ಅಲಂಕಾರ ಸಾಮಾಗ್ರಿಗಳ ಜಗಜಗಿಸುವ ಅಂಗಡಿಗಳು ಒಂದೇ, ಎರಡೇ! ಎತ್ತ ನೋಡಿದರೂ ಹೆಂಗಸರು, ಗಂಡಸರು, ಮಕ್ಕಳು ತರಹೇವಾರಿ ವೇಷ ಭೂಷಣಗಳಿಂದ ಕೂಡಿ ಉಲ್ಲಾಸದಿಂದ ಓಡಾಡುತ್ತಿರುತ್ತಾರೆ. ದೇವಸ್ಥಾನ ಅಥವಾ ಮಠವು ಸುಣ್ಣಬಣ್ಣಗಳಿಂದ, ಹಸಿರುವಾಣಿ ಚಪ್ಪರದಿಂದ, ನೆಲ ಸಾರಣೆ ಕಾರಣೆ, ರಂಗವಲ್ಲಿಗಳಿಂದ ಅಲಂಕೃತಗೊಂಡಿರುತ್ತದೆ. ಜಾತ್ರೆ ನಡೆಯುವ ಎಲ್ಲಾ ದಿನಗಳಲ್ಲಿ ದೇವರಿಗೆ ಅಲಂಕಾರ, ವಿಶೇಷ ಪೂಜೆ, ಹಗಲಿರುಳೆನ್ನದ ದೇವರ ವಿಧ ವಿಧವಾದ ಉತ್ಸವಗಳು ನಡೆಯುತ್ತವೆ. ಕೆಲವು ಕಡೆ ಅಗ್ನಿಕೊಂಡ ಇತ್ಯಾದಿ ಸಾಂಪ್ರದಾಯಿಕ ಆಚರಣೆಗಳು ಜರುಗುತ್ತವೆ. ವಿಧವಿಧ ವಾದ್ಯಗಳ ಮೊರೆತ, ಭಕ್ತರ ಉದ್ಘೋಷ, ದೇವರ ಸ್ತೋತ್ರ, ಮಂತ್ರ ಪಠಣ ನಿರಂತರ. ರಾತ್ರಿವೇಳೆಯಂತೂ ಪಟಾಕಿ, ಸುರುಸುರು ಬತ್ತಿಗಳ ಮದ್ದಿನ ವಿನೋದಾವಳಿ ಮನಮೋಹಕ.

ಜಾತ್ರೆಗೆ ಬರುವ ಜನರಿಗೆ ಧರ್ಮಾರ್ಥ ಊಟೋಪಚಾರದ ವ್ಯವಸ್ಥೆ ಇರುತ್ತದೆ. ದೊಡ್ಡ ಜಾತ್ರೆಯಾದರೆ ನಾಲ್ಕಾರು ಕಡೆ ಕೊಪ್ಪಲು ಹಾಕಿ ದಾಸೋಹದ ಏರ್ಪಾಡು ಮಾಡುವುದುಂಟು. ದಾಸೋಹದ ಉದ್ದೇಶಕ್ಕಾಗಿ ದತ್ತಿಗಳು ಇರುತ್ತವೆ. ಊರವರು ಮನೆಗೆ ಇಂತಿಷ್ಟು ಎಂದು ದವಸ ಮತ್ತಿತರ ಪರಿಕರಗಳನ್ನು ಸಂಗ್ರಹಿಸುತ್ತಾರೆ. ಅದರಂತೆ ಅಡಿಗೆ ಮಾಡಲು ಬಡಿಸಲು ಸ್ವಯಂಸೇವೆಯ ಭಕ್ತರಿರುತ್ತಾರೆ. ಹಳ್ಳಿಗಳ ಯುವಕ-ಯುವತಿಯರು ಇದಕ್ಕೆ ಮುಂದಾಗುತ್ತಾರೆ. ಇಲ್ಲಿ ಪಂಕ್ತಿಭೇದವಿಲ್ಲದೆ ಎಲ್ಲರೂ ಒಟ್ಟಿಗೆ ಕುಳಿತು ಪ್ರಸಾದ ಭಾವನೆಯಿಂದ ಊಟ ಮಾಡುವ ದೃಶ್ಯ ಎಲ್ಲೆಲ್ಲೂ.





ಜಾತ್ರೆಗೆ ಬರುವ ಜನರ ಬಾಯಾರಿಕೆ ಹಿಂಗಿಸಲು ಅರವಂಟಿಕೆಗಳು ಇರುತ್ತವೆ. ಧರ್ಮಾರ್ಥವಾಗಿ ಕೆಲವು ದಾನಿಗಳು ಪಾನಕ, ನೀರು ಮಜ್ಜಿಗೆ ನೀಡುವುದುಂಟು. ವಿಶೇಷ ಸಂದರ್ಭಗಳಲ್ಲಿ ಕೋಸಂಬರಿ, ಉಸುಳಿ, ರಾಸಾಯನ ಮೊದಲಾದ ಪ್ರಸಾದವನ್ನು ವಿತರಿಸುತ್ತಾರೆ. ಗ್ರಾಮಾಂತರ ಪ್ರದೇಶದ ಜನ, ಅಷ್ಟೇ ಏಕೆ, ಉದ್ಯೋಗಕ್ಕಾಗಿ ಪೇಟೆ ಸೇರಿದ ಹಳ್ಳಿಗರೂ ಸಹ ಜಾತ್ರೆಗಳಿಗೆ ಹೋಗಲು ಬಿಡುವು ಮಾಡಿಕೊಳ್ಳುತ್ತಾರೆ. ಜನರಲ್ಲಿ ಜಾತ್ರೆ, ಪರಿಷೆ, ರಥೋತ್ಸವ ಎಂಬುವು ಅವರ ಬದುಕಿನಲ್ಲಿ ಎಷ್ಟು ಬೆರೆತಿವೆ ಎಂದರೆ ಅವುಗಳ ಸಂಬಂಧವಾದ ಅನೇಕ ಗಾಥೆಗಳು, ಒಡಪುಗಳು ಹುಟ್ಟಿಕೊಂಡು ಮಾತಿನ ನಡುವೆ ಬಳಕೆಯಾಗುತ್ತಿವೆ. ಆಚರಣೆಗೆ ಸಂಬಂಧಿಸಿದ ಜಾನಪದ ಹಾಡುಗಳು ಜನರ ನಾಲಿಗೆಯ ಮೇಲೆ ನಲಿದಾಡುತ್ತವೆ. ಜನರು ಕಳೆದ ಸಲದ ಜಾತ್ರೆಯ ದಟ್ಟ ನೆನಪುಗಳನ್ನು ಮೆಲುಕು ಹಾಕುತ್ತಲೇ ಈ ಸಲದ ಜಾತ್ರೆಯನ್ನು ಸಡಗರದಿಂದ ಬರಮಾಡಿಕೊಳ್ಳುತ್ತಾರೆ.

ಜಾತ್ರೆ ಆರಂಭವಾಗುತ್ತಲೇ ದೇವರ ಪೂಜೆಗೆ ಅಗತ್ಯವಾದ ಬಾಳೆಹಣ್ಣು ತೆಂಗಿನಕಾಯಿ, ಕರ್ಪೂರ ಹೂಗಳ ಮಾರಾಟಕ್ಕೆ ಅಂಗಡಿಗಳು ತಲೆ ಎತ್ತುತ್ತವೆ. ಆನಂತರ ಜನರ ಅವಶ್ಯಕತೆಗಳನ್ನು, ಬೇಡಿಕೆಗಳನ್ನು ಅನುಸರಿಸಿ ವಿವಿಧ ಅಂಗಡಿಗಳು ಸಾಲುಗಟ್ಟುತ್ತವೆ. ಪುಟ್ಟಮಕ್ಕಳಿಗಂತೂ ಜಾತ್ರೆಯೆಂದರೆ ಸೊಂಪಾದ ಹುಲ್ಲುಗಾವಲಿಗೆ ಕಣ್ಣು ಕಳಚಿಬಿಟ್ಟ ಕರುಗಳಂತೆ ಆಗಿ ಬಿಡುತ್ತಾರೆ. ಏನವರ ಉಲ್ಲಾಸ, ಸಂಭ್ರಮ! ಅವರಿಗೆ ಬೇಕಾದ ತಿಂಡಿತಿನಿಸುಗಳು, ಆಟಿಕೆಗಳು ಎಲ್ಲಾ ಅಲ್ಲಿ ಲಭ್ಯ. ಅಲ್ಲಲ್ಲಿ ಮನರಂಜನೆ ನೀಡಿ ಕಾಸು ಕೇಳುವ ಹಾವಾಡಿಗರು, ಕೋತಿ ಕುಣಿಸುವವರು, ಗಳೆಯೂಟದ ದೊಂಬರು, ಹಗಲುವೇಷದ ಕಲಾವಿದರು ಕಾಣುತ್ತಾರೆ. ಹೀಗಾಗಿ ಜಗದ ನೋವನ್ನು ಮರೆತು ಉಲ್ಲಾಸಪಡುವ ಜನಸಂದಣಿ ಅಲ್ಲಿ !.

ಕೆಲವು ಜಾತ್ರೆಗಳಲ್ಲಿ ವಸ್ತುಪ್ರದರ್ಶನದ ಏರ್ಪಾಡು ಇರುತ್ತದೆ. ಜಾತ್ರೆಗೆ ಬಂದ ಜನರಿಗೆ ಮಾಹಿತಿ ಒದಗಿಸುವ ಪ್ರದರ್ಶನ ಮಳಿಗೆಗಳು, ಸರ್ಕಾರದ ವಿವಿಧ ಇಲಾಖೆಗಳು ತೆರೆದ ಮಳಿಗೆಗಳಲ್ಲಿ ಅತ್ಯಾಧುನಿಕ ವಿಧಾನದ ಕೃಷಿ ಪದ್ಧತಿ, ಗುಡಿಕೈಗಾರಿಕೆಯ ಪ್ರಾತ್ಯಕ್ಷಿಕೆಗಳು ಇದ್ದು ಅವು ಒಂದು ರೀತಿಯಲ್ಲಿ ಸಮುದಾಯ ಶಿಕ್ಷಣದ ಕೆಲಸವನ್ನು ನೆರವೇರಿಸುತ್ತವೆ.

ಅಲ್ಲಿರುವ ಕಲಾವೇದಿಕೆಯು ಸಂಗೀತ, ನೃತ್ಯ, ನಾಟಕ, ಪ್ರವಚನ, ಚರ್ಚೆ ಮೊದಲಾದ ಪ್ರದರ್ಶನ ಕಲೆಯಿಂದ ಜನಮನಕ್ಕೆ ಉಲ್ಲಾಸವನ್ನು ಆ ಮೂಲಕ ತಿಳುವಳಿಕೆಯನ್ನು ನೀಡಲಾಗುತ್ತದೆ. ಅಷ್ಟೇ ಅಲ್ಲ, ಸುಪ್ತವಾದ ಯುವ ಪ್ರತಿಭೆಗಳನ್ನು ಬೆಳಕಿಗೆ ತರುವ ಸಾಧನವೂ ಆಗುತ್ತವೆ. ಹೀಗಾಗಿ ಜಾತ್ರೆಗಳು ಆಯಾ ಪ್ರದೇಶದ ಜನರ ಸಾಂಸ್ಕೃತಿಕ ಬದುಕಿನ ಮಗ್ಗುಲನ್ನು ಪ್ರಕಾಶಕ್ಕೆ ತರುವ ಉತ್ತಮ ಸಾಧನಗಳಾಗುತ್ತವೆ. ಅವಕಾಶವಿಲ್ಲದೆ ಕಣ್ಮರೆಯಾಗುತ್ತಿರುವ ಗ್ರಾಮೀಣ ಕಲೆಗಳನ್ನು ಉಳಿಸಿ, ಬೆಳೆಸಲು ಈ ಪ್ರದರ್ಶನ ವೇದಿಕೆಗಳು ನೆರವಾಗುತ್ತವೆ. ಈ ಕಾರಣದಿಂದಾಗಿಯೇ ಜಾತ್ರೆಗಳು ಜನಜೀವನದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿವೆ.

ಇನ್ನೊಂದು ವಿಚಾರ, ಜನಮಾನಸದ ವಿಶ್ಲೇಷಾತ್ಮಕ ಅಧ್ಯಯನಕ್ಕೆ ಜಾತ್ರೆಗಳು ವಿಪುಲವಾದ ಸ್ವಾರಸ್ಯಕರ ದೃಶ್ಯಗಳನ್ನು, ಅಪೂರ್ವ ಸನ್ನಿವೇಶಗಳನ್ನು ಒದಗಿಸುತ್ತವೆ. ಭಿನ್ನ ಅಭಿರುಚಿಯ ಜನರ ವ್ಯಕ್ತಿ-ನಿಷ್ಠ ಗುಣ ವೈವಿಧ್ಯಗಳು ಅಧ್ಯಯನಯೋಗ್ಯವಾಗಿದ್ದು ಅವು ಜಾತ್ರೆಯ ಜನರಲ್ಲಿ ದೊರಕುತ್ತವೆ. ಜಾತ್ರೆಗೆ ಬರುವ ಜನರಲ್ಲಿ ಭಿನ್ನ ಜಾಯಮಾನದವರೂ ಇರುತ್ತಾರೆ. ಸೂಕ್ಷ್ಮವಾಗಿ ಗಮನಿಸುತ್ತಾ ಹೋದರೆ ವಿಚಿತ್ರ ಜನ, ವಿಲಕ್ಷಣ ಪ್ರಸಂಗಗಳು ನಮಗೆ ಕಾಣಸಿಗುತ್ತವೆ. ಕುತೂಹಲಿಗಳಾದ ಚಿಣ್ಣರು, ಗ್ರಾಮೀಣ ಸೊಗಡಿನ ಮುಗ್ಧ ಹೆಣ್ಣುಮಕ್ಕಳು, ವ್ಯವಹಾರ ಕುಶಲಿ ವ್ಯಾಪಾರಿಗಳು, ಭಕ್ತ ಸಂಪನ್ನ ನಿಜಭಕ್ತರು, ಸೇವಾ ಮನೋಭಾವದ ಯುವಜನ, ಪ್ರದರ್ಶನ ಪ್ರಿಯರಾದ ಷೋಕಿಲಾಲರು, ಸಮಯ ಸಾಧಕರು- ಎಷ್ಟೊಂದು ವೈವಿದ್ಯ ಜಾತ್ರೆಗೆ ನೆರೆದ ಜನರಲ್ಲಿ?

'ಜನ ಮರುಳೋ ಜಾತ್ರೆ ಮರುಳೋ' ಎಂಬ ನಾಣ್ಣುಡಿಯೊಂದಿದೆ. ಅದು ಸಮೂಹ ಸನ್ನಿ ಎಂಬರ್ಥದಲ್ಲಿ! ಆದರೆ ಜಾತ್ರೆಗೆ ಮರುಳಾಗಿ ಬರುವ ಜನರಿಗೆ ಭಕ್ತಿಭಾವದ ಹಿನ್ನಲೆಯಲ್ಲಿ, ಮನರಂಜನೆಯ ಉಲ್ಲಾಸದ ಮೂಲಕ ಸರಿಯಾದ ತಿಳುವಳಿಕೆ, ಸೂಕ್ತ ಮಾರ್ಗದರ್ಶನ, ಸಕಾಲಿಕ ಪ್ರೋತ್ಸಾಹ, ಮಾರ್ಗದರ್ಶಗಳನ್ನು ಒದಗಿಸುವ ಜಾತ್ರೆಗಳ ಉಪಕಾರ ಸಣ್ಣದ್ದಲ್ಲ. ಒಂದು ರೀತಿಯಲ್ಲಿ ಅವು ಸಾಮುದಾಯಿಕ ಉದಾತ್ತೀಕರಣಕ್ಕೆ ಕಾರಣವಾಗುತ್ತವೆ.

ಮಾನವ ಸಂಬಂಧಗಳು ಮಧುರವಾಗಲು ಅವು ಸಹಾಯಕ. ಜನರು ಭಾವನಾತ್ಮಕವಾಗಿ ಒಂದುಗೂಡಲು ಯಾವುದೋ ಒಂದು ನೆಲೆಯಲ್ಲಿ ನಾವೆಲ್ಲಾ ಒಂದು ಎಂಬ ಭಾವನೆಯನ್ನು ಬೆಳೆಸಿಕೊಳ್ಳಲು ಅವು ಪ್ರೇರಕ, ತಾರಕ !

ಬರಡೆನಿಸುವ ಶ್ರಮಜೀವನದಲ್ಲಿ ಸಂತಸದ ಕಾರಂಜಿಯನ್ನು ಪುಟಿಸುವ, ಶಾಂತಿಮಂತ್ರ ಬೋಧಿಸುವ ಜಾತ್ರೆಗಳು ಜನರಿಗೆ ಜೀವಧಾತುವನ್ನು ಒದಗಿಸುತ್ತವೆ; ಅವರು ಮೌಲ್ಯಾರಾಧಕರಾಗುವಂತೆ ಮಾಡುತ್ತವೆ.

ನಮ್ಮ ಪೂರ್ವಿಕರ ಜಾತ್ರೆಯ ಪರಿಕಲ್ಪನೆಗೆ ಒತ್ತುಕೊಟ್ಟು, ಅದನ್ನು ಕಾಲೋಚಿತಗೊಳಿಸುತ್ತಾ ಬರುತ್ತಿರುವ ಎಲ್ಲಾ ಜಾತ್ರೆಗಳ ವ್ಯವಸ್ಥೆಗೆ ನಾವೆಲ್ಲಾ ಋಣಿಯಾಗಿರಬೇಕು.

ಈ ಹಿನ್ನೆಲೆಯಲ್ಲಿ ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ನಡೆಯುವ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರೆಯ ಬಗ್ಗೆವಿಚಾರ ಮಾಡೋಣ.

**ಸಿದ್ಧಗಂಗೆಯ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ :**

ನಮ್ಮ ನಾಡಿನಲ್ಲಿ ವಿವಿಧ ಕಡೆ ನಡೆಯುತ್ತಿರುವ ಜಾತ್ರೆಗಳಲ್ಲಿ ಸಿದ್ಧಗಂಗೆಯ ಜಾತ್ರೆ ವಿಶಿಷ್ಟವಾದುದು. ೧೯೦೫ರಲ್ಲಿ ಶ್ರೀ ಉದ್ದಾನಶಿವಯೋಗಿಗಳು ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಯನ್ನು ಆರಂಭಿಸಿದರು. ಶಿವರಾತ್ರಿ ಹಬ್ಬಕ್ಕೆ ಹೊಂದಿಕೊಂಡಂತೆ ೧೦ ದಿನಗಳ ಜಾತ್ರೆ ನಡೆಯುತ್ತಾ ಬಂದಿದೆ. ನಿರಂತರವಾಗಿ ಧಾರ್ಮಿಕ ಕಾರ್ಯಕ್ರಮಗಳು, ಉತ್ಸವಗಳು ನಡೆಯುತ್ತವೆ. ಕ್ಷೇತ್ರಾಧಿಪತಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ವಿವಿಧ ಉತ್ಸವಗಳು ಗೋಸಲ ಸಿದ್ಧೇಶ್ವರರ ಉತ್ಸವದಿಂದ ಆರಂಭಗೊಂಡು ಕೊನೆಯ ದಿನದ ತೆಪ್ಪೋತ್ಸವದಲ್ಲಿ ಮುಕ್ತಾಯವಾಗುತ್ತದೆ. ವೃಷಭವಾಹನ, ಗಜವಾಹನ, ನಂದಿವಾಹನ, ರಾವಣವಾಹನ, ಹುಲಿವಾಹನ, ಸಿಂಹವಾಹನ, ಅಶ್ವವಾಹನ, ನವಿಲುವಾಹನ, ಶೇಷವಾಹನ, ಹುತ್ತದ ವಾಹನ, ನವರಂಗಪಾಲಕಿ, ಮುತ್ತಿನಪಾಲಕಿ, ಬಿಲ್ವವೃಕ್ಷ ವಾಹನ, ಶಿವರಾತ್ರಿಯ ಮಾರನೇ ದಿನ ಮಹಾರಥೋತ್ಸವ, ರುದ್ರಾಕ್ಷಿ ಮಂಟಪೋತ್ಸವ, ಬೆಳ್ಳಿಪಾಲಕಿ, ಶೂನ್ಯಸಿಂಹಾಸನ ರೋಹಣ ಉತ್ಸವ, ಪಂಚಬ್ರಹೋತ್ಸವ (ಪರಶಿವನ ಪಂಚ ಮುಖಗಳ ಪ್ರತೀಕವಾಗಿ ಐವರು ಸ್ವಾಮಿಗಳನ್ನು ಕೂರಿಸಿ ಮಾಡುವ ಅಡ್ಡಪಲ್ಲಕ್ಕಿ ಉತ್ಸವ) ಕೊನೆಯದಾಗಿ ಕಲ್ಯಾಣಿಯಲ್ಲಿ ನಡೆಸುವ ತೆಪ್ಪೋತ್ಸವ.

ಶ್ರೀ ಸಿದ್ಧಗಂಗಾ ಜಾತ್ರೆಗೆ ಆಗಮಿಸುವ ಲಕ್ಷಾಂತರ ಜನರಿಗೆ ಏರ್ಪಡಿಸುವ ದಾಸೋಹದ ವ್ಯವಸ್ಥೆ ಅದ್ಭುತ. ಸಕಾಲಕ್ಕೆ ಎಲ್ಲರಿಗೂ ಊಟ ದೊರಕುವಂತೆ ನಾಲ್ಕಾರು ಕಡೆ ಕೊಪ್ಪಲು ಹಾಕಿರುತ್ತಾರೆ. ಊರುಗಳಿಂದ ಸ್ವಯಂ ಸೇವಕರಾಗಿ ಕೆಲಸ ಮಾಡಲು ಭಕ್ತರು ಆಗಮಿಸುತ್ತಾರೆ. ಜಾತ್ರೆ ಮುಗಿಯುವವರೆಗೆ ಅವರ ಸೇವೆ ನಡೆಯುತ್ತಲೆ ಇರುತ್ತದೆ. 'ಕೊಡುವವನೂ ಸಿದ್ಧಲಿಂಗ, ಸಹಸ್ರಮುಖವಾಗಿ ಉಣ್ಣುವವನೂ ಆತನೇ' ಎಂಬ ವಿಶ್ವಾಸ ಪೂಜ್ಯರದು.

ಜಾತ್ರೆಗಳು ಬರೀ ಭಕ್ತಿ ಸಮರ್ಪಣೆ, ಕೊಳ್ಳುವ–ಮಾರುವ ವಹಿವಾಟಿಗೆ ಮೀಸಲಾಗಬಾರದು. ಜನರು ತಮ್ಮ ಬದುಕು ಸುಧಾರಿಸುವಂಥ ಜ್ಞಾನಾನುಭವಗಳನ್ನು ಪಡೆಯಬೇಕು ಎಂದು ಶ್ರೀಕ್ಷೇತ್ರದ ಕುಲಪತಿಗಳಾದ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಜಾತ್ರೆಗೆ ಹೊಸ ಆಯಾಮವನ್ನು ನೀಡಿದರು. ಹೊಸ ಹೊಸ ಉಪಯುಕ್ತ ಯೋಜನೆಗಳನ್ನು ರೂಪಿಸಿದರು. ಅವರ ಜನಪರ ಕಾಳಜಿ ಹಾಗೂ ದೂರದೃಷ್ಟಿಯ ಫಲವೇ **'ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ'. ೧೯೬೩ರಿಂದ ವಸ್ತು ಪ್ರದರ್ಶನ ನಡೆಯುತ್ತಿದ್ದು ಲಕ್ಷಾಂತರ ಜನ ಇದರ ಪ್ರಯೋಜನ ಪಡೆಯುತ್ತಿದ್ದಾರೆ.**

ಇಲ್ಲಿ ದನದ ಜಾತ್ರೆಯೂ ನಡೆಯುತ್ತಿದ್ದು ಹಳೆಯ ಮೈಸೂರು ಪ್ರಾಂತದ ಹಳ್ಳಿಕಾರ ರಾಸುಗಳು ಹೆಚ್ಚಿನ ಸಂಖ್ಯೆಯಲ್ಲಿ ಸೇರುತ್ತವೆ. ಅವುಗಳು ಗಟ್ಟಿಮುಟ್ಟಾದ ಎರೆಭೂಮಿ ಕೃಷಿಗೆ ಲಾಯಕ್ಕಾಗಿರುತ್ತವೆ. ಉತ್ತರ ಕರ್ನಾಟಕದ ಎರೆಭೂಮಿ ಕೃಷಿಗೆ ಆ ಭಾಗದ ರೈತರು ಇವನ್ನು ಅಧಿಕ ಸಂಖ್ಯೆಯಲ್ಲಿ ಕೊಂಡೊಯ್ಯುತ್ತಾರೆ. ಬಹಳ ಹಿಂದೆ ಹಾಸನದಲ್ಲಿ ನಡೆದ ದನಗಳ ಜಾತ್ರೆಯಲ್ಲಿ ಏರ್ಪಡಿಸಿದ್ದ ವಸ್ತುಪ್ರದರ್ಶನವನ್ನು ಉದ್ಘಾಟನೆ ಮಾಡಲು ದಯಮಾಡಿಸಿದ್ದ ಪೂಜ್ಯರು ಶ್ರೀಕ್ಷೇತ್ರದ ಜಾತ್ರೆಯ ಸಂದರ್ಭದ ಇಂಥ ವಸ್ತುಪ್ರದರ್ಶನವನ್ನು ಏರ್ಪಡಿಸಿದರೆ ಆ ಭಾಗದ ಜನರಿಗೆ ಹೆಚ್ಚಿನ ಉಪಯೋಗವಾಗುವುದೆಂದು ಆಲೋಚಿಸಿದರು. ಸಿದ್ಧಗಂಗೆಯ ಸೇವಾಕಾರ್ಯದಲ್ಲಿ ಮುಂಚೂಣಿಯಲ್ಲಿರುವ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ಪ್ರತಿನಿಧಿಗಳೊಡನೆ ಈ ಬಗ್ಗೆ ಸಮಾಲೋಚಿಸಿದರು. ಸರಿ, ಸಂಘವು ಪೂಜ್ಯರ ಸಂಕಲ್ಪವನ್ನು ಈಡೇರಿಸಲು ಬದ್ಧ ಕಂಕಣವಾಗಿ ೧೯೬೩ರಲ್ಲಿ ಅದನ್ನು ಶುಭಾರಂಭಗೊಳಿಸಿತು.

ಗ್ರಾಮೀಣ ಪ್ರದೇಶದ ರೈತರು, ಸಣ್ಣಪುಟ್ಟ ಕೈಗಾರಿಕೋದ್ಯಮಿಗಳು, ಸಣ್ಣ ವ್ಯಾಪಾರಸ್ಥರು, ಕರಕುಶಲ ಕಸುಬುದಾರರು, ಕಲಾವಿದರು ಮೊದಲಾದವರಿಗೆ ಕಾಲೋಚಿತ ತಿಳುವಳಿಕೆ, ಸೂಕ್ತ ಮಾರ್ಗದರ್ಶನ, ಪ್ರೋತ್ಸಾಹಗಳನ್ನು ದೊರಕಿಸುವ ವಸ್ತುಪ್ರದರ್ಶನದ ಏರ್ಪಾಡು ಮಾಡಿದರು.

ವಿವಿಧ ಕ್ಷೇತ್ರಗಳಲ್ಲಿ ಆಗಿರುವ ಸಾಧನೆಗಳ ಚಿತ್ರ ಒಂದು ಕಡೆ, ಇತ್ತೀಚಿನ ಸಂಶೋಧನೆಗಳಿಂದ ಆಯಾ ಕ್ಷೇತ್ರಗಳಲ್ಲಿ ಆಗಿರುವ ಪ್ರಗತಿಯ ಪ್ರಾತ್ಯಕ್ಷಿಕೆಗಳು ಮತ್ತೊಂದೆಡೆ. ವಿಸ್ತಾರವಾದ ಪ್ರದೇಶದಲ್ಲಿ ಕೇಂದ್ರ ಸರ್ಕಾರ, ರಾಜ್ಯಸರ್ಕಾರ, ಬ್ಯಾಂಕುಗಳು, ವಿವಿಧ ಇಲಾಖೆಯ ಮಳಿಗೆಗಳು, ಖಾಸಗಿಯವರ ಪ್ರದರ್ಶನ ಮಳಿಗೆಗಳಿಂದ ತುಂಬಿದ ಪ್ರದರ್ಶನವು ಸಮೂಹ ಶಿಕ್ಷಣಕ್ಕೆ ತೆರೆದ ಬಾಗಿಲು ಆಗಿ ಅತ್ಯಂತ ಉಪಯುಕ್ತವೆನಿಸುವಂತಾಯಿತು. ವ್ಯವಸಾಯ, ಕೈಗಾರಿಕೆ, ಆರೋಗ್ಯ, ಶಿಕ್ಷಣ, ಅರಣ್ಯ, ತೋಟಗಾರಿಕೆ, ರೇಷ್ಮೆ, ನೀರಾವರಿ, ಪಶುಪಾಲನೆ, ಮೀನುಗಾರಿಕೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಖಾದಿ ಮತ್ತು ಗ್ರಾಮೋದ್ಯೋಗ ಮೊದಲಾದ ವಿಭಾಗಗಳು ಅಲ್ಲುಂಟು.

ಈ ವಸ್ತುಪ್ರದರ್ಶನದ ಉದ್ದೇಶಗಳಲ್ಲಿ ಕೆಲವನ್ನು ಪಟ್ಟಿ ಮಾಡಬಹುದು. ದೃಶ್ಯಮಾಧ್ಯಮದ ಮೂಲಕ ಕೈಗಾರಿಕಾ ಕ್ಷೇತ್ರದ ಮಾಹಿತಿ. ರೈತರಿಗೆ ಕೃಷಿಕ್ಷೇತ್ರದಲ್ಲಿ ಇತ್ತೀಚಿನ ಸಂಶೋಧನೆ ಹಾಗೂ ಸುಧಾರಿತ ವ್ಯವಸಾಯ ಪದ್ಧತಿ. ನೀರು ಸಂಗ್ರಹಣೆ ಮತ್ತು ಬಳಕೆ ಬಗ್ಗೆ ಜನಜಾಗೃತಿ, ಕೃಷಿ ತಜ್ಞರಿಂದ ಪ್ರದರ್ಶನ ಉಪನ್ಯಾಸ. ಸ್ಥಳೀಯ ಸ್ತ್ರೀ ಶಕ್ತಿ ಹಾಗೂ ಯುವಶಕ್ತಿಗಳ ಸದ್ಬಳಕೆ ಬಗ್ಗೆ ಮಾಹಿತಿ ಮಹಿಳಾ ಸಂಘಗಳಿಗೆ ಮಾರ್ಗದರ್ಶನ, ಅವರು ಗುಡಿ ಕೈಗಾರಿಕೆಗಳ ಮೂಲಕ ಸಂಗ್ರಹಿಸಿದ ಉತ್ಪನ್ನಗಳ ಪ್ರದರ್ಶನ ಮತ್ತು ಮಾರಾಟ. ಸೌರಶಕ್ತಿಯ ಬಳಕೆ ಬಗ್ಗೆ ಅರಿವು ಮೂಡಿಸುವುದು. ಅರಣ್ಯ ಸಂಪತ್ತು ಗಿಡಮೂಲಿಕೆಗಳ ಸಂಗ್ರಹಿಸುವ ಬಗ್ಗೆ ಪ್ರೋತ್ಸಾಹ ನೀಡುವುದು. ಗ್ರಾಮೀಣ ಕಲೆಗಳ ಪ್ರೋತ್ಸಾಹ, ಜಾನಪದ ಸಾಹಿತ್ಯ ಸಂಗ್ರಹದ ಬಗ್ಗೆ ಉತ್ತೇಜನ– ಹೀಗೆ ಹತ್ತು ಹಲವು ಬಗೆಯ ಉಪಯುಕ್ತವಾದ ಜ್ಞಾನವನು, ಮಾಹಿತಿಯನ್ನು ಒದಗಿಸುವ ವಸ್ತು ಪ್ರದರ್ಶನವು ಲೋಕಶಿಕ್ಷಣ ಕಾಯಕವನ್ನು ಪರಿಣಾಮಕಾರಿ ಯಾಗಿ ಮಾಡುವುದೆಂದು ಮನಗಂಡ ಪೂಜ್ಯರು ಅದಕ್ಕೆ ಆದ್ಯತೆ ನೀಡಿದ್ದಾರೆ.

ವಸ್ತುಪ್ರದರ್ಶನಕ್ಕೆ ಮೀಸಲಾಗಿರುವ ವಿಶಾಲವಾದ ಪ್ರಾಂಗಣದಲ್ಲಿ ಒಂದು ರಂಗಮಂಟಪ ನಿರ್ಮಿಸಲಾಗಿದೆ. ಆ ಕಲಾವೇದಿಕೆಯ ವಿಷಯತಜ್ಞರ, ವಿದ್ವಾಂಸರ, ಸಾಹಿತಿಗಳ ಉಪನ್ಯಾಸಗಳಿಗೆ ಅವಕಾಶ ನೀಡುತ್ತದೆ. ವಿವಿಧ ಕಲಾವಿದರ ಕಲಾಪ್ರದರ್ಶನಕ್ಕೆ ಅಲ್ಲಿ ವ್ಯವಸ್ಥೆಯಿರುತ್ತದೆ. ನಾಟಕ, ಸಂಗೀತ, ನೃತ್ಯ ಇತ್ಯಾದಿ ಮನರಂಜನಾ ಕಾರ್ಯಕ್ರಮಗಳು ಅಲ್ಲಿ ಜರುಗುತ್ತವೆ. ಜಾತ್ರೆಗೆ ಬಂದ ಜನ ಇವುಗಳಲ್ಲಿ ಪಾಲ್ಗೊಂಡು ವಿವಿಧ ರಸಮಂಜರಿಯಲ್ಲಿ ಬೇಸರ ನೀಗಿ ಉಲ್ಲಾಸ ಹೊಂದುತ್ತಾರೆ. ಕಲಾವೇದಿಕೆಯ ಉದ್ದೇಶವೇ ಅದು.

ಸಶಕ್ತವಾದ ನಾಡನ್ನು ಕಟ್ಟಲು ದೇಶದ ಬೆನ್ನೆಲುಬು ಎನಿಸಿಕೊಂಡ ರೈತರಿಗೆ ಅದನ್ನು ಸಮೃದ್ಧಗೊಳಿಸಲು ತತ್ಪರರಾಗುವ ಯುವ ಚೇತನಗಳಿಗೆ, ದೇಶದ ಪ್ರಗತಿಯಲ್ಲಿ ಸಮಪಾಲು ಹೊಂದಿರುವ ಸ್ತ್ರೀಶಕ್ತಿಗಳಿಗೆ ಸೂಕ್ತ ಪ್ರೋತ್ಸಾಹ ಹಾಗೂ ಮಾರ್ಗದರ್ಶನ ನೀಡುವ, ಕ್ಷೀಣಿಸುತ್ತಿರುವ ಜಾನಪದ ಕಲೆಗಳಿಗೆ, ಗುಡಿ ಕೈಗಾರಿಕೆಗಳಿಗೆ ಸೂಕ್ತ ಅವಕಾಶ ನೀಡಿ, ಅವನ್ನು ಉಳಿಸಿ ಬೆಳಸುವ ಸಲುವಾಗಿ ಮತ್ತು ಬದುಕಿನ ಯಾಂತ್ರಿಕತೆಯಲ್ಲಿ ಮಾನವೀಯ ಮೌಲ್ಯಗಳು ಮೂಲೆಗುಂಪಾಗದಂತೆ ಜಾಗೃತಿ ಮೂಡಿಸಿ ನವೋಲ್ಲಾಸ ಒದಗಿಸುವಂಥ ಜಾತ್ರೆಗಳನ್ನು ಪರಿಕಲ್ಪಿಸಿದ ನಮ್ಮ ಪೂರ್ವಿಕರ ಮುಂದಾಲೋಚನೆಯನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ.

ಜಾತ್ರೆಗಳು ಬರಿಯ ಭಕ್ತಿ ಆವೇಶದ ಉತ್ಸವವಾಗಬಾರದು. ಜೀವನ ಸುಧಾರಣೆಯ ಮಾರ್ಗಸೂಚಿಯಾಗಬೇಕು, ಜೀವನೋತ್ಸಹದ ಸೆಲೆಯಾಗಬೇಕೆಂದು ಸಂಕಲ್ಪಿಸಿ ಜಾತ್ರೆ ವಸ್ತುಪ್ರದರ್ಶನದ ಮೂಲಕ ಲೋಕಶಿಕ್ಷಣ ಕಾರ್ಯವನ್ನು ನೆರವೇರಿಸುತ್ತಿರುವ ಪೂಜ್ಯರ ಪರಿಶ್ರಮಕ್ಕೆ ನಾಡವರು ಋಣಿಯಾಗಿರಬೇಕು. ❑

## ತನು ಮನ ಧನ

-ಗೊ.ರು. ಚನ್ನಬಸಪ್ಪ *

ದೇಶ, ಧರ್ಮ, ಸಮಾಜ, ಇವುಗಳ ಸೇವೆಗೆ ಸಂಬಂಧಿಸಿದಂತೆ ನಿಮ್ಮ ತನು ಮನ ಧನಗಳನ್ನರ್ಪಿಸಿ ಎಂದು ಕರೆ ಕೊಡುವುದನ್ನು, ಇಂತಹ ಕಾರ್ಯಕ್ಕೆ ಇಂತಹವರು ತನು ಮನ ಧನಗಳನ್ನರ್ಪಿಸಿದ್ದಾರೆ ಎಂದು ಹೊಗಳುವುದನ್ನು ಈ ಕೆಲಸಕ್ಕೆ ತನ್ನ ತನು ಮನ ಧನಗಳನ್ನು ಅರ್ಪಿಸಿದ್ದೇನೆ ಎಂದು ಹೇಳಿಕೊಳ್ಳುವುದನ್ನು ನಾವು ಸಾಮಾನ್ಯವಾಗಿ ಕೇಳುತ್ತೇವೆ. ಈ ಮಾತು ಬಳಸುವಾಗ ತನು ಮನ ಧನಗಳ ಅರ್ಥ, ಉದ್ದೇಶ, ಇತಿಮಿತಿ ಇವುಗಳ ಬಗ್ಗೆ ಕಲ್ಪನೆ ನಮಗಿರುವುದಿಲ್ಲ.

ಆದರೆ ಯಾವುದೇ ಒಂದು ಉದಾತ್ತ ಉದ್ದೇಶಕ್ಕೆ ಅರ್ಪಿಸಬೇಕಾದ ತನು ಮನ ಮತ್ತು ಧನ ಹೇಗಿರಬೇಕು, ಅರ್ಪಿಸುವ ಬಗೆ ಹೇಗೆ, ಅರ್ಪಿಸುವ ಮುನ್ನ, ಅರ್ಪಿಸಿದ ನಂತರದ ಸ್ಥಿತಿ ಏನು ಎಂಬ ಬಗ್ಗೆ ನಾವು ವಿಚಾರ ಮಾಡುವುದಿಲ್ಲ. ಕೇವಲ ಭಾವಾವೇಶದಿಂದ ಮೂಡಿಬರುವ ಪದ ಸಮುಚ್ಚಯಗಳಿವು. ಹೇಳಿ ಕೇಳುವವರು ಭಾವಜೀವಿಗಳಾಗಿದ್ದರೆ ಇಬ್ಬರಿಗೂ ಈ ಮಾತುಗಳು ಬಲು ಅಪ್ಯಾಯಮಾನ. ಸಂದರ್ಭ ಬಂತೆಂದರೆ ಸಾಕು ತೀರ ಸರಳವಾಗಿ, ಸಹಜವೆಂಬಂತೆ ಈ ಮಾತುಗಳನ್ನು ಬಳಸಿಬಿಡುತ್ತೇವೆ. ಏಕೆಂದರೆ ಅದು ಹೇಳಲು ಮತ್ತು ಕೇಳಲು ಹಿತವೆನಿಸುವುದರಿಂದ ಆದರೆ ಕೃತಿಯ ಗತಿ? ಬರಿಯ ತೋರಿಕೆ.

ತನು ಮನ ಧನಗಳ ಅರ್ಪಣೆಗೆ ಸಂಬಂಧಿಸಿದಂತೆ ಶರಣ ಹಡದಪ್ಪಣ್ಣ ಒಂದು ಸುಂದರ ವಚನ ಹೇಳಿದ್ದಾರೆ;

***'ತನುವ ಕೊಟ್ಟು ಭಕ್ತರಾದೆವೆಂಬರು, ಮನವ ಕೊಟ್ಟು ಭಕ್ತರಾದೆವೆಂಬರು, ಧನವ ಕೊಟ್ಟು ಭಕ್ತರಾದೆವೆಂಬರು, ತನು ಮನ ಧನವನೆಂತು ಕೊಟ್ಟಿರಿ ಹೇಳಿರಣ್ಣಾ? ನಿಮ್ಮ ಒಡವೆ ನಿಮ್ಮಲ್ಲೆ ಇದೆ, ಅದು ಹೇಗೆಂದರೆ ಬಲ್ಲವರು ನೀವು ಕೇಳಿ,***

*ತನುವ ನೀವು ಕೊಟ್ಟರೆ ನೀವು ರೂಪಾಗಿ ಇರುವುದಕ್ಕೇನು?*
*ಮನವ ನೀವು ಕೊಟ್ಟರೆ ನಿಮಗೆ ನಡೆ ನುಡಿ ಚೈತನ್ಯವೇನು?*
*ಧನವು ನೀವು ಕೊಟ್ಟರೆ ಕ್ಷುತ್ತಿಗೆ ಭಿಕ್ಷ ಸೀತಕ್ಕೆ ರಗಟೆ ಏನು?*
*ಅಂತಲ್ಲ ಕೇಳಿರಣ್ಣ, ತನುವ ಕೊಟ್ಟುವುದಾದರೆ: ಹುಸಿ ಹೋದರೆ ಹುಟ್ಟೇನು, ತೊಟ್ಟೇನೆಂಬ ಗುಣವಳಿದರೆ ತನುವು ಗುರುವಾಯಿತ್ತು. ಮನವ ಕೊಟ್ಟುದಾವುದೆಂದರೆ; ವ್ಯಾಕುಲವೆಲ್ಲ ಅಳಿದು ನಿರಾಕುಳವಾಗಿ ನಿಂದರೆ ಮನವೆ ಲಿಂಗವಾಯಿತ್ತು. ಧನವ ಕೊಟ್ಟಿಹೆವೆಂಬುದಾವುದೆಂದರೆ, ಇಂದಿಗೆ ನಾಳೆಗೆ ಎಂಬ ಸಂದೇಹ ಭಾವಕ್ಕೆ ಭಯಕ್ಕೆ ಭವವಳಿದುದೇ ಜಂಗಮವಾಯಿತ್ತು ಇಂತಿದೀಗ ನಮ್ಮ ಮುನ್ನಿನ ಆದ್ಯರ ನಡೆನುಡಿ, ಮಾಟಕೂಟ. ಇದನರಿಯದೆ ಏನೊಂದು ಮಾಡಿದರೂ, ನೀಡಿದರೂ, ಕೊಟ್ಟರೂ,ಕೊಂಡರೆಯೂ, ವಾಯಕ್ಕೆ ವಾಯ ಬಸವಪ್ರಿಯ ಕೂಡಲ ಚೆನ್ನಬಸವಣ್ಣ*

ಇದು ತನು ಮನ ಧನಗಳ ಅರ್ಥ, ಆಶಯ ಅವುಗಳ ವಾಸನೆ ಹರಿದು ಪರಿಶುದ್ಧವಾಗದಿದ್ದರೆ ಆ ಭಕ್ತಿ ಭಿನ್ನಭಕ್ತಿಸ್‌ಯಾಗುತ್ತದೆ. ಡಂಭಾಚಾರವಾಗುತ್ತದೆ. ತನು ಮನ ಧನಗಳು ವಾಣಿಜ್ಯೋದ್ದೇಶಕ್ಕೆ ಹೂಡುವ ಬಂಡವಾಳದ ವಸ್ತುಗಳಲ್ಲ, ಸದುದ್ದೇಶಕ್ಕಾಗಿ ಸದ್ವಿನಿಯೋಗ ಮಾಡಬೇಕಾದ ಸಾಧನಗಳು. ಈ ವಿನಿಯೋಗ ಒಂದು ಕೊಟ್ಟು ಎರಡು ಪಡೆಯುವ ಬಡ್ಡಿಕಾರನ ವಿನಿಯೋಗದಂತಲ್ಲ; ಎಲ್ಲವನ್ನೂ ಕೊಟ್ಟು ಏನನ್ನೂ ಪಡೆಯದ ಸಹಜ ಸದ್ಭಕ್ತಿಯ ಸಮರ್ಪಣೆ.

ತನುವನ್ನು ಅರ್ಪಿಸಿದೆವೆಂದರೆ ಆ ತನುವಿನ ಅಭಿಮಾನ ಅಳಿದಿರಬೇಕು. ಮನವನ್ನು ಅರ್ಪಿಸಿದೆವೆಂದರೆ ಆ ಮನದ ಆತಂಕ ಅಳಿದಿರಬೇಕು. ಧನವನ್ನು ಅರ್ಪಿಸಿದೆವೆಂದರೆ ಆ ಧನದ ಆಸೆ ಅಳಿದಿರಬೇಕು. ಇಂದು ನಾಳಿನ ಸಂದೇಹವಿರಬಾರದು. ಆಗ ತನು ಗುರುವಿನ ಗದ್ದುಗೆ ಏರುತ್ತದೆ: ಮನ ಲಿಂಗದ ಸ್ವರೂಪವಾಗುತ್ತದೆ: ಧನ ಜಂಗಮದ ಜಗಲಿಯನ್ನೇರುತ್ತದೆ. ಇದಕ್ಕೆ ಹೊರತಾಗಿ ತನು-ಮನ-ಧನಗಳನ್ನು ಅರ್ಪಿಸಿದೆವೆಂದರೆ ಅದು ಹಡಪದಪ್ಪಣ್ಣ ಹೇಳುವಂತೆ ವಾಯಕ್ಕೆ ವಾಯ-ಎಂದರೆ ಕೇವಲ ಕಪಟ !.

ತನು ಮನ ಧನಗಳ ಅರ್ಥ ಅಸ್ತಿತ್ವ ಆಶಯವನ್ನು ಅರಿತು ಅವುಗಳನ್ನು ಯೋಗ್ಯ ರೀತಿಯಲ್ಲಿ ವಿನಿಯೋಗಿ ಸುವುದು ನಿಜವಾದ ಧರ್ಮ; ನಿಜವಾದ ಅರ್ಪಣೆ. ಅಂತಹ ಅರ್ಪಣೆಯಿಂದ ಅವನ ತನು ಮನ ಭಾವಗಳು ಶುದ್ಧ ವಾಗುತ್ತವೆ. ಅವನ ಸರ್ವಕ್ರಿಯೆಗಳು ಶುದ್ಧವಾಗುತ್ತವೆ. ಹೆಚ್ಚೇನು, ಅವನ ಕಾಯವೇ ಕೈಲಾಸವಾಗುತ್ತದೆ!.

ತನುವೊಂದು ಕಡೆ, ಮನವೊಂದು ಕಡೆ, ಧನವೊಂದು ಕಡೆ ಇದ್ದರೆ ಅದು ಅರ್ಪಣೆಯೇ ಅಲ್ಲ. ಹಾಲಿಗೆ ಹಾಲು ಬೆರೆತಂತೆ, ನೀರಿಗೆ ನೀರು ಬೆರೆತಂತೆ ಅವೆಲ್ಲವೂ ಒಗ್ಗೂಡಿ ಸೇವೆ ಸಲ್ಲಬೇಕು. ಆಗಲೇ ಅದು ಸಾರ್ಥಕ ಅರ್ಪಣೆಯಾಗುತ್ತದೆ. ಇಲ್ಲವಾದರೆ ವ್ಯರ್ಥ ಘೋಷಣೆಯಾಗುತ್ತದೆ. ತನು ಮನ ಧನಗಳು ಚೆಲ್ಲಿ ಬಿಸುಟುವ ಕಸ ಕಡ್ಡಿಗಳಲ್ಲ; ಅವಕ್ಕೆ ಪಾವಿತ್ರ್ಯತೆ ಇದೆ. ಘನತೆ ಗೌರವಗಳಿವೆ. ಬಳಸುವಾಗ ತುಂಬ ಎಚ್ಚರವಿರಬೇಕು. ಎಚ್ಚರ ತಪ್ಪಿದರೆ ತನು ರೋಗದ ಆಗರವಾಗುತ್ತದೆ; ಮನ ಚಾಂಚಲ್ಯದ ಬೀಡಾಗುತ್ತದೆ. ಧನ ತೂತು ಬಿದ್ದ ದೋಣಿಯಾಗುತ್ತದೆ. ಇದು ಮಾನವನಿಗೆ ಸಲ್ಲದ ನಡೆ. ಅರಿತು ಆಚರಿಸಿದರೆ ಅದಕ್ಕಿಂತ ಮಿಗಿಲಾದ ಯೋಗವಿಲ್ಲ, ದೊರೆಯುವ ಶಾಂತಿಗಿಂತ ಮಿಗಿಲಾದ ಶಾಂತಿ ಮತ್ತೊಂದಿಲ್ಲ.

* ನಂ. 406, ಪ್ರಣಾಮ ಎಸ್. ರಸ್ತೆ, 3ನೇ ಕ್ರಾಸ್, ಐಡಿಯಲ್ ಹೋಮ್ ಟೌನ್‌ಶಿಪ್, ರಾಜರಾಜೇಶ್ವರಿನಗರ, ಬೆಂಗಳೂರು.







## ಜೇಡರ ದಾಸಿಮಯ್ಯ

-ಎಚ್.ಎಸ್. ಸಿದ್ಧಗಂಗಪ್ಪ *

ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ವಿಶ್ವವೇ ಬೆರಗಾಗುವಂತೆ ಮಾಡಿ 'ಜಗಜ್ಯೋತಿ; ಎಂಬ ಹೆಗ್ಗಳಿಕೆಗೆ ಪಾತ್ರರಾದ ಬಸವಣ್ಣನವರ ಸಾಧನೆ ಸಿದ್ಧಿಗಳಿಗೆ ಅವರ ಮೇಲೆ ಗಾಢವಾದ ಪ್ರಭಾವ ಬೀರಿದವರಲ್ಲಿ ಜೇಡರ ದಾಸಿಮಯ್ಯ ಮತ್ತು ಮಾದಾರ ಚೆನ್ನಯ್ಯ ಪ್ರಮುಖರಾದವರು. ಬಸವಣ್ಣನವರೇ ಈ ಬಗ್ಗೆ ಅನೇಕ ವಚನಗಳಲ್ಲಿ ವ್ಯಕ್ತಪಡಿಸಿದ್ದಾರೆ. ಬಸವಣ್ಣನವರ ಮೇಲೆ ಪ್ರಭಾವ ಬೀರಿದ ಹಿರಿಯ ಸಮಕಾಲೀನರಾದ ಜೇಡರ ದಾಸಿಮಯ್ಯ ಶಿವನ ಪರಮಭಕ್ತನಾಗಿ ಜನಮಾನಸದಲ್ಲಿ ಅಚ್ಚ ಹಸಿರಾಗಿದ್ದಾನೆ.

ಜೇಡರ ದಾಸಿಮಯ್ಯನನ್ನು ದಾಸ, ದಾಸಿಮ, ದಾಸಿಮಾರ್ಯ, ದೇವದಾಸ, ಜೇಡರದಾಸ, ಮೊದಲಾದ ಹೆಸರುಗಳಿಂದ ಕರೆಯಲಾಗುತ್ತದೆ. ಈತ ಪೌರಾಣಿಕ ವ್ಯಕ್ತಿಯೂ ಹೌದು. ಹಾಗೆಯೇ ಚಾರಿತ್ರಿಕ ವ್ಯಕ್ತಿಯೂ ಹೌದು. ಅಲ್ಲದೆ ಕೆಲವು ಶಾಸನಗಳಲ್ಲಿಯೂ ಕೂಡ ಈತನ ಹೆಸರು ಉಲ್ಲೇಖವಾಗಿದೆ. ಈ ಶಾಸನಗಳ ಕಾಲ ಕ್ರಿ.ಶ. ೧೧೪೮ ರಿಂದ ಕ್ರಿ.ಶ. ಸುಮಾರು ೧೨೦೦. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಜೇಡರ ದಾಸಿಮಯ್ಯ ಒಬ್ಬ ಪ್ರಭಾವಶಾಲಿ ಶಿವಶರಣನಾಗಿದ್ದಂತೆ ಕಂಡು ಬರುತ್ತದೆ. ಅಲ್ಲದೆ ಜೇಡರ ದಾಸಿಮಯ್ಯನನ್ನು ಒಬ್ಬ ಅವತಾರ ಪುರುಷನೆಂದೇ ಪುರಾಣಗಳಲ್ಲಿ ವರ್ಣಿಸಲಾಗಿದೆ. ದಾಸಿಮಯ್ಯನ ಕಥೆ ಸೋಮೇಶ್ವರಪುರಾಣ, ಶಿವತತ್ತ್ವಚಿಂತಾಮಣಿ, ಸಿದ್ಧೇಶ್ವರ ಪುರಾಣ, ಚತುರಾಚಾರ್ಯಪುರಾಣ, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ, ಮೊದಲದ ಕಾವ್ಯಗಳಲ್ಲಿ ಕಂಡು ಬರುತ್ತದೆ. ಇವರೆಲ್ಲರೂ ಆತನ ದಿವ್ಯಚರಿತೆಯನ್ನು ಪವಾಡಗಳನ್ನು ವರ್ಣಿಸಿದ್ದಾರೆ. ಅವನ ಮಹಿಮೆಯನ್ನು ಹಾಡಿ ಹೊಗಳಿದ್ದಾರೆ.

ಈತನ ಜನ್ಮಸ್ಥಳ, ಗುಲ್ಬರ್ಗ ಜಿಲ್ಲೆಯ ಸುರಪುರ ತಾಲ್ಲೂಕಿನ ಮುದನೂರು. ಇದು ದಾಸಿಮಯ್ಯನ ಕಾಲಕ್ಕೆ ಪ್ರಸಿದ್ಧ ಕ್ಷೇತ್ರವಾಗಿತ್ತು. ಇಂದಿಗೂ ಆ ಊರಿನಲ್ಲಿ ದಾಸಿಮಯ್ಯನ ಇಷ್ಟದೈವವಾದ ರಾಮನಾಥ ದೇವಾಲಯವಿದೆ. ಈತನ ತಂದೆ ನೇಯ್ಗೆಕಾಯಕ ಮಾಡುತ್ತಿದ್ದ ಕಾಮಯ್ಯ, ತಾಯಿ ಶಂಕರಿ. ಇವರಿಬ್ಬರು ರಾಮನಾಥನ ಪರಮಭಕ್ತರಾಗಿದ್ದರು. ಬಾಲಕ ದಾಸಿಮಯ್ಯನು ಶಿವ ಭಕ್ತಸಂಪನ್ನನಾಗಿದ್ದನು. ಅವನು ಪ್ರತಿನಿತ್ಯ ತಂದೆತಾಯಿಗಳ ಜೊತೆಯಲ್ಲಿ ರಾಮನಾಥ ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸಿ ಬರುತ್ತಿದ್ದನು. ದಿನಕಳೆದಂತೆ ದೈವೀಭಕ್ತಿ ಅವನಲ್ಲಿ ಪ್ರಬಲವಾಗಿ ಬಲಿಯಿತು. ಜೊತೆಗೆ ಜ್ಞಾನದಾಹವೂ ಹೆಚ್ಚಾಯಿತು. ಜ್ಞಾನದಾಸೋಹವನ್ನು ತಣಿಸಲು ಶ್ರೀಶೈಲದ ಕಡೆ ಮುಖ ಮಾಡಿದನು. ಶ್ರೀಶೈಲ ಆ ವೇಳೆಗಾಗಲೇ ಶಿವಾನುಭವಿಗಳ ಪುಣ್ಯಕ್ಷೇತ್ರವಾಗಿತ್ತು.

**ಲೋಕಸಂಚಾರ :**

ಆ ಶಿವಕ್ಷೇತ್ರದಲ್ಲಿ ಮಹಾಮಹಿಮರೂ, ತಪೋಧನವೂ ಆದ ಚಂದ್ರಗುಂಡ ಶಿವಾಚಾರ್ಯರಿಂದ ದಾಸಿಮಯ್ಯ ದೀಕ್ಷೆ ಪಡೆದು ಶ್ರೇಷ್ಠ ಶಿವಾನುಭವಿಯಾಗಿ ರೂಪುಗೊಂಡು ಗುರುಗಳ ಆದೇಶದಂತೆ ಲೋಕಕಲ್ಯಾಣಾರ್ಥವಾಗಿ ಸಂಚಾರವನ್ನು ಕೈಗೊಂಡು ಮುದನೂರಿನ ಕಡೆಗೆ ಹೊರಡುತ್ತಾನೆ. ದಾರಿಯಲ್ಲಿ ಹಿಂಸೆಯಲ್ಲಿ ತೊಡಗಿದ್ದ ಬೇಡ ಪಡೆಯನ್ನು ಅವರಲ್ಲಿನ ಅಜ್ಞಾನ ಅಂಧಕಾರವನ್ನು ಕಂಡು ಮರುಕಗೊಂಡು ಅವರ ಮನಸ್ಸು ಪರಿವರ್ತನೆ ಮಾಡಿ, ಅವರಿಚ್ಚೆಯಂತೆ ಶಿವದೀಕ್ಷೆಯನ್ನು ನೀಡಿ ಸನ್ಮಾರ್ಗದಲ್ಲಿ ಮುನ್ನಡೆಯಲು ದಾರಿದೀಪವಾದನು. ನಂತರ ತನ್ನ ಪ್ರಯಾಣವನ್ನು ಮುಂದುವರಿಸಿ ನಂದಿ ಗ್ರಾಮಕ್ಕೆ ಬಂದನು. ಅಲ್ಲಿ ವೈದಿಕರೊಡನೆ ಕೆಲವು ವಿಚಾರಗಳಲ್ಲಿ ವಾದ ಉಂಟಾಗಿ, ಅವರೆಲ್ಲರನ್ನು ತಮ್ಮಲ್ಲಿದ್ದ ಅಪಾರವಾದ ಜ್ಞಾನಸಂಪತ್ತಿನಿಂದ ಅವರನ್ನೆಲ್ಲ ವಾದದಲ್ಲಿ ಸೋಲಿಸಿ ಶಿವದೀಕ್ಷೆ ನೀಡಿ ಅಲ್ಲಿಂದ ಗೌಡಗೆರೆ ಎಂಬ ಊರಿಗೆ ಬಂದನು. ಆ ಊರಿನ ಜನ ಜೇಡರ ದಾಸಿಮಯ್ಯನನ್ನು ಭಕ್ತಿಗೌರವದಿಂದ ಸ್ವಾಗತಿಸಿದರು. ಆ ಊರಿನ ಪ್ರಮುಖ ಮುದ್ದೇಗೌಡನೇ ಮುಂತಾದ ಅಸಂಖ್ಯಾತ ರೈತರಿಗೆ ಜ್ಞಾನಬೋಧನೆ ಮಾಡಿ ಶಿವನೇ

* 53/1, 'ಶಿವಕೃಪ', ಮೊದಲನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು.

ಸರ್ವಶ್ರೇಷ್ಠನೆಂದೂ, ಶಿವನನ್ನು ಬಿಟ್ಟು ಅನ್ಯದೇವರನ್ನು ಪೂಜೆ ಮಾಡಬಾರದೆಂದು ಜಗತ್ತಿನಲ್ಲಿನ ಸರ್ವಸ್ವವನ್ನು ಶಿವನೇ ದಯಪಾಲಿಸಿರುವನೆಂದೂ ಹೇಳುತ್ತಾನೆ. ಈ ಕೆಳಗಿನ ವಚನದಲ್ಲಿ ಆ ಭಾವನೆಯನ್ನು ವ್ಯಕ್ತಪಡಿಸಿದ್ದಾನೆ

*ಇಳೆ ನಿಮ್ಮದಾನ ಬೆಳೆ ನಿಮ್ಮದಾನ*
*ಸುಳಿದು ಬೀಸುವ ಗಾಳಿ ನಿಮ್ಮದಾನ*
*ಎತ್ತು ನಿಮ್ಮದಾನ ಬಿತ್ತು ನಿಮ್ಮದಾನ*
*ಸುತ್ತಿ ಹರಿವ ಸಾಗರವೆಲ್ಲ ನಿಮ್ಮದಾನ*
*ನಿಮ್ಮದಾನವನುಂಡು ಅನ್ಯರ ಹೊಗಳುವ*
*ಕುನ್ನಿಗಳನೇನೆಂಬೆ ರಾಮನಾಥಾ*

ನಾವು ಜೀವಿಸುತ್ತಿರುವ ಈ ಭೂಮಿಯನ್ನು ಶಿವನೇ ನಮಗೆ ದಾನವಾಗಿ ಕೊಟ್ಟಿದ್ದು. ದೇವರು ಭೂಮಿಯ ಜೊತೆಗೆ ಅಲ್ಲಿ ಬೆಳೆಯುವ ಸಮಸ್ತ ಬೆಳೆಯನ್ನು ಕೊಡುಗೆಯಾಗಿ ನೀಡಿದ. ಅಷ್ಟೇ ಅಲ್ಲ, ಇನ್ನು ನಾವು ಜೀವಿಸಲು ಬೇಕಾದ ಪ್ರಾಣವಾಯುವಾದ ಗಾಳಿಯನ್ನು ನೀಡಿದ್ದಾನೆ. ಹೀಗೆ ಜೀವಿಸಲು ದಾನವನ್ನು ನೀಡಿ ಆಸರೆಯಾದ ಮಹಾದಾನಿ ಪರಶಿವನನ್ನು ಮರೆತು ಬೇರೆ ಯಾರು ಯಾರನ್ನೋ ಪೂಜಿಸುವವರನ್ನು ಏನೆಂದು ಕರೆಯಬೇಕು; ಅಂತಹವರನ್ನು ನಾಯಿ ಕುನ್ನಿಗಳೆಂದು ಕರೆದಿದ್ದಾನೆ. ದಾಸಿಮಯ್ಯನ ನೇರನುಡಿಗಳ ಹಿಂದಿನ ಆಶಯಗಳನ್ನು ಗಮನಿಸ ಬೇಕಾಗುತ್ತದೆ.

ಜೇಡರ ದಾಸಿಮಯ್ಯನ ಲೋಕ ಸಂಚಾರ ಅಲ್ಲಿಗೇ ನಿಲ್ಲುವುದಿಲ್ಲ. ಅಲ್ಲಿಂದ ಪೊಟ್ಟಿಲಕೆರೆಗೆ ಹೋಗುತ್ತಾನೆ. ಈಗ ಅದು ಆಂಧ್ರಪ್ರದೇಶದಲ್ಲಿದೆ. ಅದನ್ನು ಪೊಟ್ಟಿಲಚರು ಎಂದು ಕರೆಯುತ್ತಾರೆ. ಪೊಟ್ಟಿಲಕೆರೆಯಲ್ಲಿ ಚಾಲುಕ್ಯ ಚಕ್ರವರ್ತಿ ಎರಡನೆಯ ಜಯಸಿಂಹ ರಾಜ್ಯವಾಳುತ್ತಿದ್ದನು. ಅದು ಜೈನರ ಪ್ರಭಾವಕ್ಕೆ ಒಳಗಾಗಿತ್ತು. ಆತನ ರಾಣಿ ಸುಗ್ಗಲೆ ಶಿವಭಕ್ತಳಾಗಿದ್ದಳು. ದಾಸಿಮಯ್ಯ ಪೊಟ್ಟಿಲಕೆರೆಗೆ ಬಂದು ಸುದ್ದಿಯನ್ನು ಕೇಳಿ ಆತನನ್ನು ಭಕ್ತಿಗೌರವದಿಂದ ಬರಮಾಡಿ ಕೊಂಡು ಶಿವದೀಕ್ಷೆಯನ್ನು ಪಡೆದಳೆಂದು ತಿಳಿದು ಬರುತ್ತದೆ. ಈ ವಿಚಾರ ರಾಜಧಾನಿಯಲ್ಲಿ ಹರಡಿ ರಾಜನಿಗೂ, ಜೈನರಿಗೂ, ಸನಾತನರಿಗೂ ತುಂಬಾ ಕೋಪವನ್ನುಂಟು ಮಾಡಿತು. ದಾಸಿಮಯ್ಯ ಅವರೊಡ್ಡಿದ ಎಲ್ಲ ವಾದಗಳಲ್ಲಿ ಪರೀಕ್ಷೆಗಳಲ್ಲಿ ಜಯಶೀಲನಾಗುತ್ತಾನೆ. ದಾಸಿಮಯ್ಯನನ್ನು ಅವಮಾನ ಮಾಡಬೇಕೆಂದು ಬಂದವರೆಲ ಸೋತು ಶೈವ ಧರ್ಮವನ್ನು ಸ್ವೀಕರಿಸುತ್ತಾರೆ.

**ವಿವಾಹ :**

ಜೇಡರ ದಾಸಿಮಯ್ಯ ಗೊಬ್ಬೂರಿನ ಮಲ್ಲಿನಾಥ ಮಹಾದೇವಿಯ ಸುಪುತ್ರಿ ದುಗ್ಗಳೆಯನ್ನು ವಿವಾಹವಾದನು. ಅವನು ಸುಮ್ಮನೆ ವಿವಾಹ ಬಂಧನಕ್ಕೆ ಒಳಗಾಗಲಿಲ್ಲ. ತಾನು ಕೈಹಿಡಿಯುವ ಬಾಳ ಸಂಗಾತಿ ಹೇಗಿರಬೇಕೆಂದು ದನ್ನು ನಿಶ್ಚಯಿಸಿದ ದಾಸಿಮಯ್ಯ ಅನೇಕ ಪರೀಕ್ಷೆ ಗಳನ್ನೊಡ್ಡಿದ. ಮರಳು ಬೆರೆಸಿದ ಅಕ್ಕಿ, ಎರಡು ಜಲ್ಲೆ ಕಬ್ಬು ಕೊಟ್ಟು ಪರಮಾನ್ನಮಾಡಿಕೊಡಲು ಹೇಳಿದನು. ಜಾಣೆಯಾದ ದುಗ್ಗಳೆ ಕಬ್ಬನ್ನು ಹಿಂಡಿ ರಸ ತೆಗೆದು ಅದರಲ್ಲಿ ಮಳಲಕ್ಕಿ ಹಾಕಿ ಜಾಲಿಸಿ ಮಳಲನ್ನು ಬೇರ್ಪಡಿಸಿದಳು. ಒಣಗಿದ ಕಬ್ಬಿನ ಸಿಪ್ಪೆಯ ಉರಿಮಾಡಿ ಕಬ್ಬಿನ ರಸ ಬೆರೆಸಿದ ಅಕ್ಕಿಯನ್ನು ಬೇಯಿಸಿ ಪರಮಾನ್ನ ಮಾಡಿ ಪರೀಕ್ಷೆಯಲ್ಲಿ ಜಯಶೀಲಳಾಗಿ ಶರಣ ದಾಸಿಮಯ್ಯನ ಕೈಹಿಡಿದಳು. ಅವರ ದಾಂಪತ್ಯಜೀವನ ಹಾಲುಚೆಲ್ಲಿದ ಬೆಳದಿಂಗಳಿನಂತೆ, ಹಾಲು ಜೇನಿನಂತೆ ಇತ್ತು. ಒಬ್ಬರನ್ನೊಬ್ಬರು ಅರ್ಥ ಮಾಡಿ ಕೊಂಡು ನಡೆಸುತ್ತಿದ್ದ ಅವರ ವೈವಾಹಿಕ ಜೀವನ ಇತರರಿಗೆ ಆದರ್ಶವಾಗಿತ್ತು. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬ ಮಾತು ದಾಸಿಮಯ್ಯನದು. ಈ ಮಾತಿಗೆ ಭಾಷ್ಯ ಬರೆದಂತಿತ್ತು ಅವರ ಕೌಟುಂಬಿಕ ಜೀವನ.

ದಾಸಿಮಯ್ಯ ದುಗ್ಗಳೆಯನ್ನು ಕೈಹಿಡಿದ ಮೇಲೆ ಸ್ವಗ್ರಾಮವಾದ ಮುದೇನೂರಿಗೆ ಹಿಂತಿರುಗಿ ತಮ್ಮ ತಂದೆ ಯವರಿಂದ ಬಂದ ನೇಯ್ಗೆಯ ಕಾಯಕದಿಂದ ಜಂಗಮ ದಾಸೋಹ ಮಾಡುತ್ತಾ, ಸದಾಶಿವ ಕೀರ್ತನೆಯಲ್ಲಿ ನಿರತ ರಾಗಿರುತ್ತಿದ್ದನು. ಒಮ್ಮೆ ಶಿವ ಇವನ ಭಕ್ತಿಯನ್ನು ಪರೀಕ್ಷಿಸ ಬೇಕೆಂದು ಒಂದು ಸನ್ನಿವೇಶವನ್ನು ಸೃಷ್ಟಿಸಿದ. ದಾಸಿಮಯ್ಯ ಒಮ್ಮೆ ತಾವು ಕಷ್ಟಪಟ್ಟು ನೇಯ್ದಿದ್ದ ತುಂಬ ಬೆಲೆಬಾಳುವ ವಸ್ತ್ರವನ್ನು ಮಾರಲು ಸಿದ್ಧಾಪುರದ ಸಂತೆಗೆ ತೆಗೆದುಕೊಂಡು ಹೋದನು. ಆದರೆ ಅಂದು ಅದನ್ನು ಕೊಳ್ಳಲು ಯಾರೂ ಬರಲಿಲ್ಲ. ಇದರಿಂದ ನಿರಾಶನಾದ ದಾಸಿಮಯ್ಯ ಊರಿಗೆ ಹಿಂತಿರುಗುವಾಗ ದಾರಿಯಲ್ಲಿ ಒಬ್ಬ ಜಂಗಮ ಇದಿರಾಗಿ ಆ ದಿವ್ಯಾಂಬರವನ್ನು ಕೊಡು ವಂತೆ ಕೇಳಿದನು. ಜಂಗಮದ ಬಗ್ಗೆ ಅಪಾರ ಭಕ್ತಿ ಗೌರವ ವನ್ನಿರಿಸಿಕೊಂಡಿದ್ದ ದಾಸಿಮಯ್ಯ ಹಿಂದು ಮುಂದು ನೋಡದೆ ಜಂಗಮರಿಗೆ ಕೊಟ್ಟುಬಿಟ್ಟನು.





ಆದರೆ ಅಲ್ಲಿ ನಡೆದಿದ್ದೇ ಬೇರೆ. ಆ ಜಂಗಮ ದಾಸಿಮಯ್ಯನ ಮುಂದೆಯೇ ಭಕ್ತಿಗೌರವದಿಂದ ನೀಡಿದ ಆ ದಿವ್ಯಾಂಬರ ವನ್ನು ಪರಪರನೆ ಹರಿದು ಚೂರು ಚೂರು ಮಾಡಿ ಬಿಸಾಡುತ್ತಾನೆ. ಸ್ಥಿತಪ್ರಜ್ಞನಾದ ದಾಸಿಮಯ್ಯ ಸ್ವಲ್ಪವೂ ವಿಚಲಿತನಾಗದೆ ಆ ಜಂಗಮನನ್ನು ಮನೆಗೆ ಕರೆದುಕೊಂಡು ಹೋಗಿ ಸತಿಪತಿಗಳಿಬ್ಬರೂ ಭಕ್ತಿಯಿಂದ ದಾಸೋಹವನ್ನು ಉಣಬಡಿಸಿದರು. ಅವರ ನಿಷ್ಕಲ್ಮಶವಾದ ಭಕ್ತಿಯಿಂದ ಸಂಪ್ರೀತನಾದ ಜಂಗಮವೇಷದ ಶಿವ ಅವರಿಗೆ ತವನಿಧಿ ಯನ್ನು ಕೊಟ್ಟು ಆಶೀರ್ವದಿಸಿ ಬಯಲಾಗುತ್ತಾನೆ. ಶಿವ ಕೊಟ್ಟ ತವನಿಧಿಯಿಂದ ಅಸಂಖ್ಯಾತ ಶರಣರಿಗೆ ದಾಸೋಹ ವನ್ನು ಮಾಡುತ್ತಾನೆ. ಶಿವ ಜಂಗಮವೇಷ ದಿಂದ ಬಂದು ತವನಿಧಿಯನ್ನು ಕೊಟ್ಟನೋ ಇಲ್ಲಿಯೇ ಬಹುಶಃ ಕವಿಗಳು ಜೇಡರ ದಾಸಿಮಯ್ಯನ ಸತ್ಯಶುದ್ಧ ನಡೆ, ಶಿವನ ಮೇಲಿಟ್ಟಿರುವ ಭಕ್ತಿಯನ್ನು ಜನತೆಗೆ ತಿಳಿಸುವ ಸದುದ್ದೇಶದಿಂದ ಜಂಗಮನ ಪಾತ್ರವನ್ನು ಸೃಷ್ಟಿಸಿ ತವನಿಧಿ ನೀಡುವ ಪವಾಡವನ್ನು ಚಿತ್ರಿಸಿರಬಹುದು. ಆದರೆ ಪವಾಡದ ಹಿಂದಿನ ಆಶಯವನ್ನು ನಾವು ಗಮನಿಸಬೇಕು. ಸತ್ಯಶುದ್ಧ ಕಾಯಕದಿಂದ ಗಳಿಸಿದ ಗಳಿಕೆಯಿಂದ ಜಂಗಮ ರಿಗೆ ದಾಸೋಹ ನೀಡುವ ಅವನ ಹೃದಯಶ್ರೀಮಂತಿಕೆ ಇತರರಿಗೆ ಅನುಕರಣೀಯವಾದುದು.

ಜೇಡರ ದಾಸಿಮಯ್ಯ ಒಬ್ಬ ಶ್ರೇಷ್ಠ ವಚನಕಾರ. ಅವನ ವಚನಾಂಕಿತ 'ರಾಮನಾಥ'. ಈತನ ೧೭೬ ವಚನ ಗಳು ದೊರೆತಿವೆ. (ದಾಸಿಮಯ್ಯನ ಸತಿ ದುಗ್ಗಳೆಯೂ ಒಬ್ಬ ವಚನಕಾರ್ತಿಯಾಗಿ 'ದಾಸಯ್ಯಪ್ರಿಯ ರಾಮನಾಥಾ' ಎಂಬ ಅಂಕಿತದಿಂದ ವಚನಗಳನ್ನು ರಚಿಸಿದ್ದು, ಆಕೆಯ ಎರಡು ವಚನಗಳು ಮಾತ್ರ ಸಿಕ್ಕಿವೆ.) ಅವನ ಒಂದೊಂದು ವಚನಗಳು ಅರ್ಥಪೂರ್ಣವಾಗಿವೆ. ಕಿರಿದರಲ್ಲಿ ಹಿರಿದಾದ ಅಮೃತವ ತುಂಬುವ ಅವನ ಜಾಣ್ಮೆ, ಪ್ರಭುದೇವರನ್ನು ನೆನಪಿಗೆ ತರುತ್ತದೆ. ಉದಾಹರಣೆಗಾಗಿ ಅವನ ಈ ಕೆಳಗಿನ ವಚನವನ್ನು ಅವಲೋಕಿಸಬಹುದು.

***ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ***
***ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ***
***ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ***
***ನಿಮ್ಮನಿತ್ತೆ ಕಾಣಾ ರಾಮನಾಥಾ***

ದಾಸಿಮಯ್ಯ ಯಾವುದೇ ಆಸೆ ಆಮಿಷಗಳಿಗೆ ಒಳಗಾಗದಂತೆ ಕಾಣುವುದಿಲ್ಲ. ಆನೆ, ಸಂಪತ್ತು, ಮುತ್ತುರತ್ನಗಳು ಕೊನೆಗೆ ರಾಜ್ಯವನ್ನೇ ಕೊಡುತ್ತೇನೆಂದರೂ, ಅವನು ಯಾವುದಕ್ಕೂ ಆಸೆ ಪಡುವುದಿಲ್ಲ. ಅವನಿಗೆ ಬೇಕಾದುದು ಜೀವನದಲ್ಲಿ ಶಾಂತಿ ನೆಮ್ಮದಿಯನ್ನು ನೀಡುವುದೆಂದರೆ ಶರಣನೊಡನೆ ನಡೆಸುವ ಸಂಭಾಷಣೆ. ಅಂತಹ ಸಂಭಾಷಣೆಯಿಂದ ದೊರೆಯುವ ಜ್ಞಾನ, ಅತೃಪ್ತಿಗಳನ್ನು ಹೋಗಲಾಡಿಸುವ ಮಾತುಗಳನ್ನು ದಯಪಾಲಿಸಿದರೆ ಸಾಕು ಎನ್ನುತ್ತಾನೆ. ಏಕೆಂದರೆ ಅಂಥ ಅನುಭಾವದಿಂದ ಕೂಡಿದ ಮಾತುಗಳು ನೇರವಾಗಿ ಹೃದಯವನ್ನು ಮಾಗಿಸಿ ಬುದ್ಧಿಯನ್ನು ಬೆಳೆಸುವ ಮಾತು ಗಳಿಂದ ನಿಮಗೆ ಬೇಕಾದುದೆಲ್ಲವನ್ನು ಪಡೆದುಕೊಳ್ಳಬಹುದು ಎನ್ನುತ್ತಾನೆ.

ದೇವರ ದಾಸಿಮಯ್ಯ ವಚನ ಸಾಹಿತ್ಯದ ಪ್ರವರ್ತಕನಲ್ಲ ದಿದ್ದರೂ ಅವರ ಪ್ರಥಮಶಿಲ್ಪಿ ಎಂಬುದರಲ್ಲಿ ಸಂದೇಹವಿಲ್ಲ ಎನ್ನುತ್ತಾರೆ ದಾರ್ಶನಿಕ ಕವಿ ಡಾ|| ಸಿದ್ಧಯ್ಯ ಪುರಾಣಿಕರು. ಗಾತ್ರದಲ್ಲಿ ಪಾತ್ರತೆಯಲ್ಲಿ, ಸೂತ್ರಾತ್ಮಕತೆಯಲ್ಲಿ ಚಿತ್ತಾಕರ್ಷಕತೆ ಯಲ್ಲಿ, ಸಾಹಿತ್ಯಕ ಮೌಲ್ಯದ ಮೇಲ್ಮೆಯಲ್ಲಿ ಉನ್ನತ ಸ್ಥಾನವನ್ನು ಪಡೆದಿರುವ ವಚನಗಳನ್ನು ಹೆಗ್ಗಳವಾಗಿ ರಚಿಸಿ ಆ ಸಾಹಿತ್ಯ ಪ್ರಕಾರಕ್ಕೊಂದು ಮೂರ್ತರೂಪವಿತ್ತವನು ದೇವರ ದಾಸಿಮಯ್ಯ ಎಂಬ ಡಾ|| ಸಿದ್ಧಯ್ಯ ಪುರಾಣಿಕರ ಅಭಿಪ್ರಾಯ ಗಮನಾರ್ಹವಾದುದು.

ಹಿರಿಯ ವಿದ್ವಾಂಸರಾದ ದೊ.ಲ. ನರಸಿಂಹಾ ಚಾರ್ಯರು ಜೇಡರ ದಾಸಿಮಯ್ಯನ ವಚನಗಳ ಸಾಹಿತ್ಯಕ ಗುಣಗಳನ್ನು ಸಾರವತ್ತಾಗಿ ಸಂಗ್ರಹಿಸಿ ನಿರೂಪಿಸಿದ್ದಾರೆ. 'ಇವನ ವಚನಗಳಲ್ಲಿ ಜೀವಕಳೆ ಇದೆ. ದೇವರ ದಾಸಿಮಯ್ಯನು ತಾನು ಹೇಳಬೇಕಾದ ಮಾತುಗಳನ್ನು ಮನಮುಟ್ಟುವ ಹಾಗೆ ಹೇಳುತ್ತಾನೆ. ಆ ವಚನಗಳಲ್ಲಿ ತತ್ತ್ವದ ಶುಷ್ಕವಾದ ನಿರೂಪಣೆ ಯಿಲ್ಲ, ಉದಾತ್ತವಾದ ಭಾವಗಳನ್ನು ಬಹುಚಮತ್ಕಾರವಾಗಿ ಸುಲಭವಾದ ಮಾತುಗಳಲ್ಲಿ ಓದಿದೊಡನೆಯೇ ಮನಸ್ಸಿಗೆ ಹಿಡಿಯುವ ಹಾಗೆ ಒಂದೊಂದು ಅರ್ಥ ಗರ್ಭಿತವಾದ ಉಪಮಾನದಿಂದ ಒಂದೊಂದು ದೊಡ್ಡ ಚಿತ್ರವೇ ಕಣ್ಣೆದುರಿಗೆ ನಿಂತ ಹಾಗೆ ಬರೆಯುವುದರಲ್ಲಿ ದೇವರ ದಾಸಿಮಯ್ಯನು ಬಹು ಕುಶಲನು. ಜೇಡರ ದಾಸಿಮಯ್ಯನ ವಚನಗಳನ್ನು ಓದಿದಾಗ ನರಸಿಂಹಾಚಾರ್ಯರ ಮಾತುಗಳು ಗುಣಾತ್ಮಕ ಎನಿಸುತ್ತದೆ. ❑

## 'ಕುರ್ವನ್ನೇವೇಹ ಕರ್ಮಾಣಿ....'

-ಡಾ॥ ಸಿ.ಪಿ. ಕೃಷ್ಣಕುಮಾರ್*

'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ' (ಕರ್ಮ ಮಾಡುತ್ತಲೆ ಇಹದಲ್ಲಿ ನೂರು ವರ್ಷ ಬದುಕೋಣ) ಎಂಬುದು ಉಪನಿಷತ್ತಿನ ಒಂದು ಉಕ್ತಿ. ಇದರ ಅರ್ಥಪರಿಧಿ, ಪರಿಭಾವಿಸಿದಷ್ಟೂ ಹಿಗ್ಗುತ್ತದೆ. ಇದೊಂದು ಸಾರ್ವಕಾಲೀನವಾದ ಸಂದೇಶವಾದರೂ, ಇಂದಿನ ನಮ್ಮ ರಾಷ್ಟ್ರಕ್ಕೆ ಅತ್ಯಂತ ಪ್ರಸ್ತುತವಾದದ್ದು.

ಮೊದಲನೆಯದಾಗಿ ಇದರಲ್ಲಿ ನಮ್ಮ ಗಮನ ಸೆಳೆಯ ತಕ್ಕದ್ದು ಅದಮ್ಯವಾದ ಜೀವನೋತ್ಸಾಹ; ನೂರು ವರ್ಷ ಬದುಕೋಣ ಎಂಬ ಹುಮ್ಮಸ್ಸು. ನಮ್ಮ ದೇಶದ ಈ ಹೊತ್ತಿನ ಪರಿಸ್ಥಿತಿಯಲ್ಲಿ ಇಂಥ ಉತ್ಸಾಹಕ್ಕೆ ಅವಕಾಶ ವಿದೆಯೆ? ಎಲ್ಲ ಮುಖಗಳಲ್ಲೂ ಬದುಕು ದುರ್ಭರವಾಗಿದೆ; ಆದಷ್ಟು ಬೇಗ 'ಕಂತೆ ಒಗೆ'ಯುವುದು ಲೇಸು ಎಂಬ ವಿಷಣ್ಣ ಭಾವನೆ ಬಹುಮಂದಿಯಲ್ಲಿ ಬೆಳೆಯುತ್ತಿದೆ. ಈ ನಿರುತ್ಸಾಹ, ನಿರ್ವೇದಗಳನ್ನು ಹೊಡೆದೋಡಿಸಬಲ್ಲುದು, ಉಪನಿಷದ್ವಾಣಿ.

ಆದರೆ ನೂರು ವರ್ಷ ಬದುಕೋಣ ಎಂದು ಸಂಕಲ್ಪಿಸಿಬಿಟ್ಟರೆ ಸಾಕೆ? ಅದರ ಸಾಧ್ಯತೆಯನ್ನೂ ಕುರಿತು ಯೋಚಿಸಬೇಕಷ್ಟೆ. ಅಲ್ಲದೆ, ನೂರು ವರ್ಷ ಹೇಗೋ ಬದುಕಿದರೆ ಪ್ರಯೋಜನವಿಲ್ಲ. ಸಾರ್ಥಕ ರೀತಿಯಲ್ಲಿ ಬದುಕ ಬೇಡವೆ? ಈ ಪ್ರಶ್ನೆಗಳಿಗೆ 'ಕುರ್ವನ್ನೇವೇಹ ಕರ್ಮಾಣಿ' ಎಂಬ ಉತ್ತರವಿದೆ. ಕರ್ಮ ಮಾಡುತ್ತ ಮಾಡುತ್ತ ನೂರು ವರ್ಷ ಬದುಕಬೇಕು; ಅದು ಸಾರ್ಥಕ ಜೀವನ.

ನಮ್ಮ ನಾಡಿನ ಇಂದಿನ ಸಮಸ್ಯೆ ಸಂಕಷ್ಟಗಳಿಗೆ ಒಂದು ಮುಖ್ಯ ಕಾರಣವೆಂದರೆ, ಜನರಲ್ಲಿ ಕೆಲಸ ಮಾಡುವ-ಕಷ್ಟ ಪಟ್ಟು ಕೆಲಸ ಮಾಡುವ ಪ್ರವೃತ್ತಿ ಕಡಿಮೆಯಾಗುತ್ತಿರುವುದು. 'ಕಾಯಕವೇ ಕೈಲಾಸ' ಎಂಬ ಮಾತು ಈಗ ಬೆಲೆ ಕಳೆದು ಕೊಂಡಿದೆ. ದುಡಿಯದೆ ಸುಖಪಡಬೇಕು ಎಂಬ ಭಾವನೆ ಎಲ್ಲೆಡೆ ಪ್ರಬಲಿಸುತ್ತಿದೆ. ರಾಷ್ಟ್ರಜೀವನ ಅಸಹನೀಯವಾಗಿ ಪರಿಣಮಿಸುತ್ತಿರುವುದು ಇದರ ಫಲವಾಗಿಯೆ. ಜಪಾನ್ ಅಮೇರಿಕಗಳಂಥ ದೇಶಗಳ ಸ್ವರ್ಗೀಯ ಪರಿಸ್ಥಿತಿಗೆ- ಈ ವಿಶೇಷಣ ತೌಲನಿಕವಾಗಿಯಾದರೂ ಸಮರ್ಥನೀಯ- ಕಾರಣ, ಅಲ್ಲಿನ ಜನತೆಯ ಕಾಯಕ ಪ್ರವೃತ್ತಿ; ಪ್ರಾಮಾಣಿಕ ವಾದ ದುಡಿಮೆಯ ಜಾಯಮಾನ. ಅಲ್ಲಿ, ನೂರು ವರ್ಷ ಬದುಕುವುದು ಸುಖಕರ ಎನ್ನುವಂಥ ಪರಿಸ್ಥಿತಿಯಿರುವುದು ಅಚ್ಚರಿಯಲ್ಲ. ನಮ್ಮಲ್ಲಾದರೆ, ದೀರ್ಘವಾದ ಬಾಳೊಂದು ಗೋಳು ಅಥವಾ ಶಿಕ್ಷೆ ಎನಿಸದಿರದು.

ಇನ್ನೂ ಒಂದು ದೃಷ್ಟಿಯಿಂದ ಕರ್ಮಪ್ರಸಕ್ತಿಗೂ ನಿಡು ಬಾಳಿಗೂ ನಿಕಟ ಸಂಬಂಧವುಂಟು. ಕಷ್ಟಪಟ್ಟು ಕೆಲಸ ಮಾಡುವುದು ಆರೋಗ್ಯಕ್ಕೆ ಒಳ್ಳೆಯದೆಂಬುದು ನಿರ್ವಿವಾದ ಸಂಗತಿ. ಆಲಸ್ಯದ ಆರಾಮ ಜೀವನ ಅನೇಕ ವ್ಯಾಧಿಗಳಿಗೆ ಎಡೆಗೊಡುತ್ತದೆ. ಶರೀರದಲ್ಲಿ ಕೊಬ್ಬು ಹೆಚ್ಚಿದರೆ, ಬೊಜ್ಜು ಬೆಳೆದರೆ, ಮರಣಕ್ಕದು ಆಮಂತ್ರಣವೇ ಸರಿ. ಆದ್ದರಿಂದ, ಆರೋಗ್ಯವನ್ನು ಕಾಪಾಡಿಕೊಂಡು ನೂರು ವರ್ಷ ಬದುಕ ಬೇಕಾದರೆ, ದೈಹಿಕವಾದ ದುಡಿಮೆ ಅತ್ಯಗತ್ಯ. ರಷ್ಯದಲ್ಲಿ ನೂರರ ಗಡಿ ದಾಟಿದವರ ಸಂಖ್ಯೆ ಬಹಳವಿದ್ದು, ಅವರ ದೀರ್ಘಾಯುಷ್ಯದ ಗುಟ್ಟು ಇದೇ ಎನ್ನಲಾಗಿದೆ.

ಹೀಗಾಗಿ, 'ಕುರ್ವನ್ನೇವೇಹ ಕರ್ಮಾಣಿ', ಜಿಜೀವಿಷೇಚ್ಛತಂ ಸಮಾಃ' ಇವೆರಡೂ ಪರಸ್ಪರ ಪೂರಕ ವಾದ ವಾಕ್ಯಖಂಡಗಳು; ಎರಡೂ ಸೇರಿ ಚಿರಂತನವಾದ ಸತ್ಯವೊಂದನ್ನು ರೂಪಿಸಿವೆ. ಶತಮಾನ ಕಾಲ ಬದುಕಬೇಕು, ಚೆನ್ನಾಗಿ ಬದುಕಬೇಕು. ಆರೋಗ್ಯ ದೃಢಕಾಯದಿಂದ ಬದುಕಬೇಕು. ಸದಾ ಕರ್ಮಮಾಡುವುದರ ಹೊರತು, ಕಾಯಕನಿಷ್ಠೆಯ ಹೊರತು ಅನ್ಯಮಾರ್ಗವಿಲ್ಲ. ಇದಕ್ಕೆ ಕರ್ಮ ಮಾಡುತ್ತಲೇ ಹಾರೈಸೋಣ. 'ಜೀವೇಮ ಶರದಶ್ಶತಮ್'.

❑

* ಪ್ರಸಿದ್ಧ ಲೇಖಕರು, ಮೈಸೂರು.





## ಸಮಾಜಪ್ರೇಮಿ ಪುರಂದರದಾಸರು

-ಬಿ.ಎಂ. ಚಂದ್ರಶೇಖರಯ್ಯ*

ಕರ್ನಾಟಕದ ಸಾಮಾಜಿಕ ಚಳುವಳಿಗಳ ಸಂದರ್ಭದಲ್ಲಿ ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಮತ್ತು ಹದಿನಾರನೆಯ ಶತಮಾನದ ದಾಸ ಸಾಹಿತ್ಯಗಳು ಜನ ಸಮೂಹದಿಂದ ಉದಿಸಿಬಂದವುಗಳಾಗಿವೆ. ಅದರಲ್ಲೊಂದು ಬಸವಣ್ಣನವರ ನೇತೃತ್ವದಲ್ಲಿ ನಡೆದ ವಚನ ಸಾಹಿತ್ಯ ಸೃಷ್ಟಿ ಇನ್ನೊಂದು ಪುರಂದರ ದಾಸರ ನೇತೃತ್ವದಲ್ಲಿ ನಡೆದ ಕೀರ್ತನ ಸಾಹಿತ್ಯ ಸೃಷ್ಟಿ. ಶಿವಶರಣರು ತಮ್ಮ ಅನುಭವ, ಅನುಭಾವಗಳನ್ನು ವಚನ ರೂಪದಲ್ಲಿ ನುಡಿದರೆ, ಹರಿದಾಸರು ಕೀರ್ತನ ರೂಪದಲ್ಲಿ ಹಾಡಿದರು. ಭಕ್ತಿಭಾವ ಇವೆರಡರ ಸಮಾನ ಅಂಶ. ಅಲ್ಲದೆ, ಆತ್ಮಸಮರ್ಪಣೆ ಮತ್ತು ಸಮಾಜದ ಓರೆಕೋರೆಗಳ ವಿಮರ್ಶೆ ಎರಡೂ ಪಂಥಗಳ ಸಮಾನ ಧ್ಯೇಯವಾದರೂ ತಾವು ನಂಬಿದ ಧರ್ಮದ ಪ್ರಚಾರವೂ ಅಪರೋಕ್ಷವಾಗಿ ಅವರ ಕೃತಿಗಳಲ್ಲಿ ಕಂಡು ಬರುತ್ತಿದೆ.

ಕೀರ್ತನಕಾರರು ಪ್ರಧಾನವಾಗಿ ಕೀರ್ತನ, ಸುಳಾದಿ, ಉಗಾಭೋಗಗಳನ್ನು ರಚಿಸಿದರು. ಕೀರ್ತನ ಸಾಹಿತ್ಯ ಎನ್ನುವುದು ಈ ಮೂರು ಪ್ರಕಾರಗಳಿಂದ ಕೂಡಿದ್ದು ಕೀರ್ತನೆ, ಸುಳಾದಿಗಳು ಹಾಡಲಿಕ್ಕೆಂದೇ ರಚಿಸಿದ ಕೃತಿ ಗಳಾಗಿವೆ. ಶಿವಶರಣರ ವಚನಗಳ ಸ್ವರೂಪ, ಕೀರ್ತನ ಕಾರರ ಉಗಾಭೋಗಗಳ ರಚನೆಗೆ ಪ್ರೇರಣೆ ಒದಗಿಸಿವೆ ಎಂಬುದು ವಿದ್ವಾಂಸರ ಅಭಿಪ್ರಾಯ. ಕನ್ನಡದಲ್ಲಿ ಉಗಾ ಭೋಗಗಳನ್ನು ಹಾಡುವ ಸಂಪ್ರದಾಯವಿದೆ. ದಾಸರ ಕೃತಿಗಳನ್ನು ಸಾಮಾನ್ಯವಾಗಿ ರಾಗ, ತಾಳ, ಲಯಗಳಿಗೆ ಅನುಸಾರವಾಗಿ ರಚಿಸಲಾಗಿರುತ್ತದೆ. ಅದರಿಂದಾಗಿಯೇ, ಒಂದು ಸಂಗೀತ ಪದ್ಧತಿಯನ್ನು ರೂಪಿಸುವಲ್ಲಿ ಕೀರ್ತನ ಕಾರರ ಕಾಣಿಕೆ ಮಹತ್ವದ್ದೆನ್ನಬೇಕು. ಅದರಲ್ಲೂ ಪುರಂದರ ದಾಸರು ಕರ್ನಾಟಕ ಸಂಗೀತ ಪಿತಾಮಹರೆಂದೇ ಪ್ರಸಿದ್ಧ ರಾಗಿದ್ದಾರೆ. ತ್ಯಾಗರಾಜರಂತಹ ವಾಗ್ಗೇಯಕಾರರು ಪುರಂದರದಾಸರನ್ನು ಪ್ರಸಿದ್ಧ ಸಂಗೀತಕಾರರೆಂದೇ ಹಾಡಿ ಹೊಗಳಿದ್ದಾರೆ. ಸಾಹಿತ್ಯಕ್ಕೆ ಹೇಗೋ ಹಾಗೆ, ಸಂಗೀತಕ್ಕೂ ಕೀರ್ತನ ಸಾಹಿತ್ಯದ ಕೊಡುಗೆ ಮಹತ್ವದ್ದು! ಕರ್ನಾಟಕ ಸಂಗೀತಕ್ಕೆ ಪುರಂದರ ದಾಸರು ಖಚಿತವಾದ ರೂಪವನ್ನು ಕೊಟ್ಟರಲ್ಲದೆ, ಅದಕ್ಕೊಂದು ವ್ಯವಸ್ಥಿತವಾದ ರೂಪವನ್ನೂ ಕೊಟ್ಟರು. ಶಾಸ್ತ್ರೀಯವಾಗಿ ಸಂಗೀತವನ್ನು ಅಭ್ಯಾಸ ಮಾಡದ ಜನಸಾಮಾನ್ಯರೂ ದಾಸರ ಪದಗಳನ್ನು ಸುಶ್ರಾವ್ಯವಾಗಿ ಹಾಡಿ ನಲಿಯಬಲ್ಲರೆಂಬುದನ್ನು ನೋಡಬಹುದಾಗಿದೆ!.

ವಚನಕಾರರಂತೆ, ಕೀರ್ತನಕಾರರೂ ಸಾಹಿತ್ಯ ನಿರ್ಮಾಣವೇ ತಮ್ಮ ಘನೋದ್ದೇಶವೆಂದು ಭಾವಿಸಿರಲಿಲ್ಲ. ಅವರು ನಿಜವಾದ ಅರ್ಥದಲ್ಲಿ ಸಾಹಿತಿಗಳಲ್ಲ !. ಅವರು ಕೇವಲ ಭಕ್ತರು ಮತ್ತು ಸಮಾಜ ಸುಧಾರಕರು. ಆದರೆ, ಅಲ್ಲಮಪ್ರಭು, ಬಸವಣ್ಣ ಮೊದಲಾದ ವಚನಕಾರರಂತೆ ಕಾವ್ಯ ಪ್ರತಿಭೆಯುಳ್ಳ ಪುರಂದರದಾಸರ 'ಕರಿಮರಿ ನಾಯಿ ಕುಂಮ್ ಗುಡುತ್ತಿತ್ತು. ಭಟ್ಟರ ಬಾಯಿ ಒಟಗುಡುತ್ತಿತ್ತು' ಎಂಬಂತಹ ಕೀರ್ತನೆಗಳಲ್ಲಿ ಸಮಾಜ ವಿಮರ್ಶೆಯು, ವಚನಕಾರರ ಸಮಾಜ ವಿಮರ್ಶೆಯಷ್ಟು ನಿಷ್ಠುರ ವಲ್ಲದಿದ್ದರೂ ತುಂಬಾ ವ್ಯಂಗ್ಯದಿಂದ ಕೂಡಿ ಕರ್ಮಠ ಬ್ರಾಹ್ಮಣ್ಯದ ನಿಷ್ಠುರತೆಯನ್ನು ಬಯಲು ಮಾಡುತ್ತದೆ. ವಚನಕಾರರಂತೆ ಹರಿದಾಸರಿಗೂ ದೇವರನ್ನು ಒಲಿಸಲು ಯಜ್ಞ ಯಾಗಾದಿಗಳು, ಪ್ರಾಣಿ ಹತ್ಯೆದಾರಿಯಲ್ಲ. ಯಾವುದೇ ಆಡಂಬರದ ದಾರಿಯೂ ಸಲ್ಲ! ಅದಕ್ಕಿರುವುದು ಒಂದೇ ದಾರಿ; ಅದೇ ಭಗವನ್ನಾಮ ಸ್ಮರಣೆ, ಭಕ್ತಿಮಾರ್ಗ!.

ಪುರಂದರದಾಸರು, ಪುರಂದರಗಡದಲ್ಲಿ ಕ್ರಿ.ಶ. ೧೪೮೪ ರಲ್ಲಿ ಜನಿಸಿದರು. ಅವರ ಮೊದಲ ಹೆಸರು ಶ್ರೀನಿವಾಸ ನಾಯಕ. ಅವರ ತಂದೆ ವರದಪ್ಪ ನಾಯಕರು ಒಬ್ಬ ಚಿನ್ನ ಬೆಳ್ಳಿ ವ್ಯಾಪಾರಿ. ಶ್ರೀನಿವಾಸನಿಗೆ ೧೬ ವರ್ಷ ಪ್ರಾಯದಲ್ಲಿ ಸರಸ್ವತಿಯೊಡನೆ ವಿವಾಹವಾಯಿತು. ಆಕೆಯೇ, ಅವರ ಜೀವನದಲ್ಲಿ ಅಪೂರ್ವ ಬದಲಾವಣೆಯನ್ನು ತರಲು ಕಾರಣ ಳಾದಳು. ನಾಯಕರು ಮೊದಲು ತುಂಬಾ ಜಿಪುಣರಾಗಿದ್ದು, ಯಾರಿಗೂ ಯಾವುದೇ ಕಾರಣಕ್ಕೂ ನೆರವು, ಸಹಾಯ

* 'ಹೇಮಕೂಟ', ನಂ.೨೮೦, ೩ನೇ 'ಎ' ಮುಖ್ಯರಸ್ತೆ, ೮ನೇ ಬ್ಲಾಕ್, ಕೋರಮಂಗಲ, ಬೆಂಗಳೂರು-೫೬೦ ೦೯೫.

ಸಹಕಾರವನ್ನು ದಾನಧರ್ಮಗಳನ್ನು ಮಾಡಿದವರಲ್ಲ. ಅವರಿಗೂ ಒಂದು ಪರೀಕ್ಷಾ ಕಾಲ ಒದಗಿ ಬಂತು. ಪುರಂದರ ವಿಠಲನು ಬ್ರಾಹ್ಮಣ ಯಾಚಕನೊಬ್ಬನ ವೇಷದಲ್ಲಿ ಬಂದು ತನ್ನ ಮಗಳ ಮದುವೆಗೆ ಹಣದ ಸಹಾಯವನ್ನು ಬೇಡಿದನು. ನಾಯಕರು ಅದನ್ನು ನಿರಾಕರಿಸಿದರು. ಆದರೆ, ವಿಠಲನು ಬಿಡದೆ ಆತನ ಹೆಂಡತಿ ಸರಸ್ವತಿಯನ್ನು ಸಹಾಯಕ್ಕಾಗಿ ಬೇಡಿಕೊಂಡನು. ಆಕೆಯು ಕೊಡಲು ತನ್ನ ಬಳಿ ವಜ್ರದ ಮೂಗುತಿಯ ಹೊರತಾಗಿ ಏನೂ ಇಲ್ಲವೆಂದು ಅದನ್ನೇ ಕೊಡುವುದಾಗಿಯೂ, ಅದನ್ನು ಮಾರಿ ಅವರ ಕೆಲಸವನ್ನು ನೆರವೇರಿಸಿಕೊಳ್ಳಬಹುದೆಂದೂ ಹೇಳಿದಳು. ನಾಯಕರು ಮನೆಗೆ ಬಂದಾಗ ಆಕೆಯ ಮೂಗಿನ ಮೇಲೆ ಮೂಗುತಿ ಇಲ್ಲದುದನ್ನು ಗಮನಿಸಿ ಆ ಬಗ್ಗೆ ಕೇಳಿದಾಗ, ಆಕೆಯು ನಿಜ ಸಂಗತಿಯನ್ನೇ ಹೇಳಿದಳು. ಸಿಟ್ಟಿಗೆದ್ದ ನಾಯಕರು ಅದನ್ನು ವಾಪಸು ತಂದುಕೊಡಬೇಕೆಂದು ಆಗ್ರಹಿಸಿದರು. ನಿರುಪಾಯಳಾದ ಸರಸ್ವತಿಯು ಬೇರೆ ದಾರಿ ಕಾಣದೆ ಸಾವಿಗೇ ಶರಣಾಗಲು, ಬಟ್ಟಲಲ್ಲಿ ವಿಷವನ್ನು ಹಾಕಿಕೊಂಡು ಕುಡಿಯಲು ಹೋದಾಗ, ಅದರಲ್ಲಿ ಆಕೆಯ ಮೂಗುತಿಯೇ ಕಂಡಿತು! ವಿಷಯ ತಿಳಿದ ನಾಯಕರಿಗೆ ಜ್ಞಾನೋದಯವಾಗಿ, ಇದು ವಿಠಲನ ಮಾಯೆಯೆಂದೇ ಬಗೆದು, ತಮ್ಮ ವ್ಯಾಪಾರ ವ್ಯವಹಾರಗಳನ್ನು ತ್ಯಜಿಸಿ, ತಮ್ಮ ಸಂಪತ್ತೆಲ್ಲವನ್ನೂ ದಾನ ಮಾಡಿ, ವಿಠಲನನ್ನರಸಿಕೊಂಡು ಹೊರಟು ಹೋದರು. ಕೊನೆಗೆ ವಿಜಯನಗರಕ್ಕೆ ಬಂದು ವ್ಯಾಸರಾಯರ ಶಿಷ್ಯತ್ವವನ್ನು ಪರಿಗ್ರಹಿಸಿ ಅಲ್ಲಿಯೇ ಕೊನೆಯವರೆಗೂ ಉಳಿದರೆಂಬ ಐತಿಹ್ಯವೊಂದಿದೆ. ಪುರಂದರ ದಾಸರ ಬದುಕಿನ ಈ ಪ್ರಮುಖ ತಿರುವಿಗೆ ಅವರ ಪತ್ನಿ ಸರಸ್ವತಿಯ ಪ್ರೇರಣೆ, ಸ್ಫೂರ್ತಿಗಳೇ ಕಾರಣವಿರಬೇಕು. ತಮ್ಮ ಜೀವನಕ್ಕೆ ಉನ್ನತ ಆದರ್ಶವನ್ನೊದಗಿಸಿಕೊಟ್ಟ ಆಕೆಯನ್ನು ನೆನೆದು ಅಂತಹ 'ಹೆಂಡತಿಯ ಸಂತತಿ ಸಾವಿರ ವಾಗಲಿ' ಎಂದು ಅವರು ತಮ್ಮ ಕೃತಿಯೊಂದರಲ್ಲಿ ಕೃತಜ್ಞತೆ ಯನ್ನು ಸೂಚಿಸಿದ್ದಾರೆ.

ಮಧ್ವಾಚಾರ್ಯರ ಶಿಷ್ಯರಾದ ನರಹರಿ ತೀರ್ಥರೇ ಕನ್ನಡದಲ್ಲಿ ಕೀರ್ತನೆಗಳನ್ನು ಬರೆದವರಲ್ಲಿ ಮೊದಲಿಗರೆನ್ನಲಾಗಿದೆ. ಆನಂತರ ಬಂದ ಆಚಾರ್ಯ ಶ್ರೀಪಾದರಾಯರು ಭ್ರಮರಗೀತೆ, ವೇಣುಗೀತೆ ಮತ್ತು ಗೋಪಿಗೀತೆಗಳನ್ನು ಕನ್ನಡದಲ್ಲಿ ಬರೆದರು. ಅಲ್ಲಿಗೆ ಆ ಪ್ರಾಚೀನ ಪರಂಪರೆ ಮುಗಿಯಿತು. ಆನಂತರ, ಪುರಂದರದಾಸರ ಗುರುವೂ ವಿಜಯನಗರ ಸಾಮ್ರಾಟ ಕೃಷ್ಣದೇವರಾಯನ ರಾಜಗುರುವೂ ಆಗಿದ್ದ ವ್ಯಾಸರಾಯರು (೧೪೪೭–೧೫೩೯) ಭಕ್ತಿಮಾರ್ಗ ಪ್ರೇರಿತ ಹರಿದಾಸ ಚಳುವಳಿ ಯೊಂದನ್ನು ಆರಂಭಿಸಿ, ಅದಕ್ಕೆ 'ದಾಸಕೂಟ'ವೆಂದು ಹೆಸರಿಸಿದರು. ಅದರಲ್ಲಿ ದಾಸರಲ್ಲಿ ಅಗ್ರಗಣ್ಯರಾದ ಪುರಂದರದಾಸ, ವಾದಿರಾಜ, ಕನಕದಾಸ ಮತ್ತು ವೈಕುಂಠದಾಸರಿದ್ದರು. ವ್ಯಾಸರಾಯರು, ಮಧ್ವಾಚಾರ್ಯರ ಗುರುಪೀಠವನ್ನೇರಿದ್ದರೂ ಅಬ್ರಾಹ್ಮಣರಾಗಿದ್ದ ಕನಕದಾಸರನ್ನೂ ತಮ್ಮ ದಾಸಕೂಟದಲ್ಲಿ ಸೇರಿಸಿಕೊಂಡಿದ್ದರು. ಮಧ್ವ ಸಿದ್ಧಾಂತಗಳ ಬಗ್ಗೆ ಸಂಸ್ಕೃತದಲ್ಲಿ ಉದ್ಗ್ರಂಥಗಳನ್ನು ಬರೆದಿದ್ದರೂ, ಕನ್ನಡದಲ್ಲಿ ಕೀರ್ತನೆಗಳನ್ನು ಬರೆದಿದ್ದಾರೆ. ವಿಶ್ವದೆಲ್ಲೆಡೆ ೧೬ನೆಯ ಶತಮಾನವು ಅನೇಕ ಧಾರ್ಮಿಕ, ಸಾಮಾಜಿಕ ಸುಧಾರಕರಿಗೆ ಜನ್ಮ ನೀಡಿದೆ. ನಾಮದೇವ, ಚೈತನ್ಯ, ಕಬೀರ, ರಮಾನಂದ, ತುಳಸೀದಾಸ, ವಲ್ಲಭ, ಏಕನಾಥ ಮತ್ತು ಮೀರಾಬಾಯಿಯಂತಹ ಅನೇಕ ಮಹಾನ್ ಆತ್ಮಗಳು ಆವಿರ್ಭವಿಸಿ, ಮನುಕುಲಕ್ಕೆ ಮಾರ್ಗದರ್ಶನ ಮಾಡಿವೆ. ಹಾಗೆಯೇ ಬೇರೆ ಬೇರೆ ಹಿನ್ನಲೆಗಳ, ಕುಲಧರ್ಮಗಳ, ಅಧಿಕಾರ ವೈವಿಧ್ಯಗಳ ಜನರೆಲ್ಲರೂ ಹಿತವಾಗಿ, ಅನುಕೂಲವಾಗಿ, ಸುಲಭವಾಗಿ ಪುರುಷಾರ್ಥ ಸಾಧನೆಯನ್ನು ಮಾಡಲು ನಾಮಸ್ಮರಣೆ, ಕೀರ್ತನೆ, ಭಜನೆ, ಇವೇ ಸಾಧನೆಗಳೆಂದು ಒತ್ತಿ ಹೇಳಿದರು.

ಹಾಗೆಯೇ ವ್ಯಾಸರಾಯರೂ ಜಾತಿಮತಗಳ, ಮೇಲು ಕೀಳುಗಳ ತಾರತಮ್ಯಗಳನ್ನು ನಿವಾರಿಸಿ ಸಮಾಜ ಸುಧಾರಣೆಗೆ ಅಪಾರವಾಗಿ ಶ್ರಮಿಸಿದರು. ದಾಸಕೂಟದಲ್ಲಿ ಅನೇಕ ದಾಸರು ವೇದ, ಉಪನಿಷತ್ತು ಮೊದಲಾದ ಉದ್ಗ್ರಂಥಗಳ ಸಾರವನ್ನು ಜನಸಾಮಾನ್ಯರಿಗೆ ಅರ್ಥವಾಗುವಂತೆ, ಅವರ ಭಾಷೆಯಲ್ಲೇ ಎಂದರೆ ಕನ್ನಡದಲ್ಲಿ ಕೀರ್ತನೆಗಳ ರೂಪದಲ್ಲಿ ರಚಿಸಿ, ಹಾಡಿದರು. ಶಾಸ್ತ್ರ ಪಾಂಡಿತ್ಯ, ಶುಷ್ಕ ತರ್ಕ, ಕರ್ಮಕಾಂಡಗಳು ಹಿಂದೆ ಸರಿದು, ಜ್ಞಾನಮಾರ್ಗ ಮತ್ತು ಭಕ್ತಿಮಾರ್ಗ ಬೆಳೆದು ನಿಂತಿತು.





ಪುರಂದರದಾಸರನ್ನು ಕರ್ನಾಟಕ ಸಂಗೀತದ ಪಿತಾಮಹ ಹಾಗೂ ದಾಸಕೂಟದ ಅಧ್ವರ್ಯುವೆಂದು ಪರಿಗಣಿಸಿದ್ದರೂ ಅವರ ಜೀವನ ವೃತ್ತಾಂತಗಳ ಬಗ್ಗೆ ಯಾವುದೇ ನಿರ್ದಿಷ್ಟ ಮಾಹಿತಿಯು ಇದುವರೆವಿಗೆ ದೊರೆತಿಲ್ಲ. ಈಗಾಗಲೇ ತಿಳಿಸಿರುವ ಐತಿಹ್ಯವೊಂದೇ ನಮಗೆ ತಿಳಿದಿರುವುದು. ಅವರ ಹುಟ್ಟೂರು, ಬಾಲ್ಯ, ಯೌವನಗಳ ವಿವರಗಳು, ಅವರ ಹೆಂಡತಿ ಮಕ್ಕಳ ವಿಚಾರ, ಅವರು ಸಂಗೀತವನ್ನು ಯಾರಿಂದ ಕಲಿತರು? ಅದರಲ್ಲಿ ಪರಿಣತಿಯನ್ನು ಹೇಗೆ ಸಾಧಿಸಿದರು? ಅಥವಾ ಅವರು ತಮ್ಮ ಕೀರ್ತನೆಗಳನ್ನು ಬರೆದಿಡುತ್ತಿದ್ದರೇ ಹೇಗೆ? ಎನ್ನುವ ಬಗ್ಗೆ ಯಾವುದೇ ವಿವರಗಳು ದೊರೆತಿಲ್ಲ. ಅವರು ತಮ್ಮ ಶ್ರೀಮಂತ ಜೀವನವನ್ನು ತೊರೆದು, ಇದ್ದಕ್ಕಿದ್ದಂತೆಯೇ ಹರಿದಾಸರಾಗಿ ಮಾರ್ಪಟ್ಟ ಸಿನಿಮೀಯ ಘಟನೆಯೊಂದು ಪ್ರಚಲಿತವಿದ್ದು, ಅದು ಬಹುಶಃ ಅವರ ಆನಂತರ ಹುಟ್ಟಿದ ಕತೆಯಾಗಿರಬಹುದು ! ಆದರೆ, ಒಂದಂತೂ ನಿಜ ಅವರು ಹರಿದಾಸರಾಗಿ ಮಾರ್ಪಟ್ಟ ಆನಂತರ ವಿಜಯನಗರಕ್ಕೆ ಬಂದು ವ್ಯಾಸರಾಯರ ಶಿಷ್ಯರಾದರು ಮತ್ತು ಅವರಿಂದ 'ದಾಸರೆಂದರೆ ಪುರಂದರ ದಾಸರಯ್ಯ' ಎಂಬ ಹೊಗಳಿಕೆಗೆ ಪಾತ್ರರಾದರು. 'ಪುರಂದರ ವಿಠಲ' ಎಂಬ ಅಂಕಿತದಲ್ಲಿ, ಅವರ ಕೀರ್ತನೆ ಗಳು ನಮಗೆ ದೊರೆಯುವುದು ಕ್ರಿ.ಶ. ೧೫೨೫ ರಿಂದ ಮಾತ್ರ.

ಪುರಂದರದಾಸರು ಕರ್ನಾಟಕದ ಹರಿಭಕ್ತ ಪಂಥದ ಅತ್ಯಂತ ಪ್ರಮುಖರಲ್ಲದೆ, ಬಹುಮುಖ ವ್ಯಕ್ತಿತ್ವದ ಪ್ರಮುಖ ಕವಿಗಳೂ ಹೌದು. ಅವರು ಭಾಗವತ ಪುರಾಣದ ಅಖ್ಯಾಯಿಕೆಗಳನ್ನು ಅತ್ಯಂತ ಸರಳ ಹಾಗೂ ಸ್ಪಷ್ಟವಾಗಿ ಕೀರ್ತನೆ ರೂಪದಲ್ಲಿ ಕೇಳುಗರ ಮನದುಂಬುವಂತೆ ರಚಿಸಿದ್ದಾರೆ. ಅವುಗಳಲ್ಲಿ ದ್ವೈತ ಸಿದ್ಧಾಂತದ ಸೊಗಡೂ ಅಡಗಿದೆ. ಅವರು ಸಮಾಜದ ವಿವಿಧ ರೀತಿಯ ಜನರ ರೀತಿನೀತಿಗಳನ್ನು, ಅವರ ಆಡಂಬರದ, ಡಾಂಭಿಕ ಜೀವನ ಪದ್ಧತಿಗಳನ್ನು ಅತ್ಯಂತ ಸೂಕ್ಷ್ಮವಾಗಿ ಗಮನಿಸಿ, ಪ್ರಾಪಂಚಿಕತೆಯನ್ನು ಬಲ್ಲವರಾಗಿದ್ದರೂ ಮಾನವ ಹಿತಸಾಧನೆಯಲ್ಲಿ ಅತ್ಯಂತ ಆಸಕ್ತರಾಗಿದ್ದರು. ಅವರ ಜೀವನ ದೃಷ್ಟಿ ಬಹು ವಿಸ್ತಾರವಾದುದು, ಹಾಗೆಯೇ ಅಸಾಧಾರಣವಾದುದು!.

ಐತಿಹ್ಯಗಳ ಪ್ರಕಾರ ಪುರಂದರದಾಸರು ೪,೭೫,೦೦೦ ಕೀರ್ತನೆಗಳನ್ನು ರಚಿಸಿದ್ದಾರೆ ಎಂದು ತಿಳಿದು ಬರುತ್ತದೆ. ಆದರೆ, ಇದುವರೆವಿಗೆ ದೊರೆತಿರುವ ಕೀರ್ತನೆಗಳ ಸಂಖ್ಯೆ ಒಂದು ಸಾವಿರವೆನ್ನಬಹುದು. ಅವರು ವೇದ, ಉಪನಿಷತ್ತು, ಪುರಾಣ, ಭಗವದ್ಗೀತೆ ಮತ್ತಿತರ ತತ್ತ್ವಶಾಸ್ತ್ರಗಳ ಸಾರವನ್ನು ತಮ್ಮ ಕೀರ್ತನೆಗಳಲ್ಲಿ ಅತ್ಯಂತ ಸರಳ ಕನ್ನಡದಲ್ಲಿ ನಿರೂಪಿಸಿದ್ದಾರೆ. ಸಂಸಾರ, ದೇಹ, ಐಹಿಕ ಸುಖ ಮತ್ತು ಸಂಪತ್ತುಗಳ ನಶ್ವರತೆಯನ್ನು ಮನಮುಟ್ಟುವಂತೆ ವರ್ಣಿಸಿ, ಅದರಿಂದ ಪಾರಾಗಲು ಇರುವ ಒಂದೇ ದಾರಿ ವೈರಾಗ್ಯವೆಂದು ತಿಳಿಸಿಕೊಡುತ್ತಾರೆ. ಕಾಲ ಬಂದಾಗ ಸಂಸಾರವನ್ನು ತ್ಯಜಿಸಿ ಹೋಗಬೇಕೇ ಹೊರತು, ಜವಾಬ್ದಾರಿಗಳಿಂದ ತಪ್ಪಿಸಿಕೊಂಡು ಪಲಾಯನವಾದವನ್ನು ಪಠಿಸುವುದಲ್ಲ! ಆದ್ದರಿಂದಲೇ ದಾಸರು ಹೇಳುತ್ತಾರೆ, 'ಈಸಬೇಕು ಇದ್ದು ಜೈಸಬೇಕು!' ಎಂದು. ಈ ಸಂಸಾರದ ಎಲ್ಲಾ ಕೋಟಲೆಗಳಿಗೂ ಬಿಡುಗಡೆಯ ದಾರಿಯೆಂದರೆ, ವಿಠಲನಲಿ ಸಂಪೂರ್ಣ ಶರಣಾಗತಿ! ಅವರ ಕೀರ್ತನೆಗಳ ಬಿಸುಪು, ತೀವ್ರತೆಗಳು ತರ್ಕಬದ್ಧವಾಗಿದ್ದು ಅವರು ತಮ್ಮ ಅನಿಸಿಕೆಗಳನ್ನು ಸಿದ್ಧಾಂತಗಳನ್ನು ಮಂಡಿಸುವ ರೀತಿಯು ಅವರ ಆಡುಭಾಷೆಯಲ್ಲಿ ಅತ್ಯಂತ ಸುಂದರವಾಗಿ ಕಾಣುತ್ತದೆ. ಅವರ ಕೀರ್ತನೆಗಳು ಕೇಳುಗರನ್ನು ಸುಮ್ಮೋಹನಗೊಳಿಸಬಲ್ಲವು! ಅವರು ವ್ಯಂಗ್ಯ ಹಾಸ್ಯ, ಕೀಟಲೆಗಳಿಂದ ತಮ್ಮ ಅನಿಸಿಕೆಗಳನ್ನು ನೇರವಾಗಿ, ನಿರ್ದಿಷ್ಟವಾಗಿ ಹೇಳಬಲ್ಲರು. ಇವರ ಸಾರಸ್ವತ ಸಂಪತ್ತನ್ನು ಗುರುಗಳಾದ ವ್ಯಾಸರಾಯರೇ ಮೆಚ್ಚಿಕೊಂಡು ಅದನ್ನು **'ಪುರಂದರೋಪನಿಷತ್ತು'** ಎಂದು ಕರೆದರು.

ಪುರಂದರದಾಸರು ಹರಿದಾಸರಾದರೂ ಸನ್ಯಾಸಿಯಲ್ಲ ಅಥವಾ ಯಾವುದೇ ಮಠದ ಸ್ವಾಮಿಯಲ್ಲ. ಅವರೊಬ್ಬ ಜನಸಾಮಾನ್ಯ ಗೃಹಸ್ಥರು. ಸಾಹಿತ್ಯವನ್ನು ಜನಪ್ರಿಯಗೊಳಿಸಿದಂತೆ, ಅವರು ಸಂಗೀತವನ್ನು ಜನಸಾಮಾನ್ಯರ ಹೃದಯಕ್ಕೆ ಮುಟ್ಟಿಸಿದರು. ಸುಲಭವಾದ ಸಂಗೀತ ಶಿಕ್ಷಣಕ್ರಮವನ್ನು ರೂಪಿಸಿದವರೂ ಅವರೇ! ಅವರು ತಮ್ಮ ತಾಳ, ತಂಬೂರಿ, ಜೋಳಿಗೆಗಳನ್ನು ಹಿಡಿದು ಇಡೀ ದೇಶದ ಉದ್ದಗಲಕ್ಕೂ ಸಂಚರಿಸಿದರು. ಆಗ ಬಹುಶಃ ದಕ್ಷಿಣ ಭಾರತದ ಪ್ರಸಿದ್ಧ ದೇವಾಲಯಗಳು, ತೀರ್ಥಕ್ಷೇತ್ರಗಳಿಗೆ ಭೇಟಿ ನೀಡಿದರು.

ಹೋದಡೆಯಲ್ಲೆಲ್ಲಾ ಕ್ಷೇತ್ರ ವರ್ಣನೆಯ ಪದಗಳನ್ನು ಕಟ್ಟಿ ಹಾಡಿದರು. ಅವರು ಚನ್ನಪಟ್ಟಣದ ಬಳಿಯ ಮಳೂರಿನ ಅಪ್ರಮೇಯ ಸ್ವಾಮಿಯ ದೇವಾಲಯದಲ್ಲಿನ ಅಂಬೆಗಾಲಿನ ಕೃಷ್ಣನನ್ನು ಕಂಡು, 'ಆಡಿಸಿದಳೆಶೋದೆ ಜಗದೋದ್ಧಾರನ' ಕೀರ್ತನೆಗಳನ್ನು ರಚಿಸಿದರೆಂದು ತಿಳಿದು ಬರುತ್ತದೆ.

ಶ್ರೀಕೃಷ್ಣನ ಲೀಲಾ ವಿನೋದಗಳನ್ನು ವರ್ಣಿಸುವ ವೈಖರಿಯಲ್ಲಿ ಪುರಂದರದಾಸರ ಸಿದ್ಧಿ ಅದ್ವಿತೀಯ!. ಈ ಕೀರ್ತನೆಗಳಲ್ಲಿ ಭಾಗವತ ಪುರಾಣದ ಹಲವಾರು ಸನ್ನಿವೇಶ ಗಳನ್ನೂ ಚಿತ್ರಗಳನ್ನೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸುವಲ್ಲಿ ದಾಸರು ಸಿದ್ಧಹಸ್ತರು. ಶೃಂಗಾರ, ಕರುಣೆ, ಪ್ರೀತಿ, ಹಾಸ್ಯ ರಸಗಳು, ಈ ಕೀರ್ತನೆಗಳಲ್ಲಿ ಉಕ್ಕಿ ಹರಿದಿವೆ. 'ಬಗೆ ಬಗೆಯ ಆಟಗಳನೆಲ್ಲಿ ಕಲಿತೆಯಯ್ಯ ಜಗಮೋಹಿತನೆ', 'ಆಡಿದನೋ ರಂಗ ಅದ್ಭುತದಿಂದಲಿ ಕಾಳಿಂಗನ ಫಣಿಯಲಿ, 'ಪೋಗಾದಿರೆಲೋ ರಂಗ ಬಾಗಿಲಿಂದಾಚೆಗೆ' ಮುಂತಾದ ಕೀರ್ತನೆಗಳು ಅತ್ಯಂತ ಸಹಜಸುಂದರವಾಗಿದ್ದು, ಅವು ಗಳನ್ನು ವಿಜಯನಗರದ ಶಿಲ್ಪಿಗಳು ವಿಜಯವಿಠಲನ ಮಂದಿರದ ಕಂಬ, ತೊಲೆ, ಬೋದಿಗೆ, ಛಾವಣಿ, ಗೋಡೆಗಳಲ್ಲಿ ಸುಂದರವಾಗಿ ಕಂಡರಿಸಿದ್ದಾರೆ.

ಪುರಂದರದಾಸರು ಪಂಥ ಪಂಗಡಗಳು, ಧಾರ್ಮಿಕ ಅಂಧಶ್ರದ್ಧೆಗಳು, ಆಚರಣೆಗಳು ಮತ್ತು ಮೂಢನಂಬಿಕೆ ಗಳನ್ನು ಮೀರಿ ನಿಂತವರು. 'ಮಾನವ ಜನ್ಮದೊಡ್ಡದು', ಅದನ್ನು ಭಗವದ್ಭಕ್ತಿಯ ಮೂಲಕ ಮುಕ್ತಿಯನ್ನು ಪಡೆಯಲು ಬಳಸಿಕೊಳ್ಳದೆ, ಹಾಳುಮಾಡಿಕೊಳ್ಳಬೇಡಿರಿ ಹುಚ್ಚಪ್ಪಗಳಿರಾ! ಎಂದು ತಮ್ಮ ಪ್ರಸಿದ್ಧ ಕೀರ್ತನೆಯಲ್ಲಿ ಜನತೆಯನ್ನು ಎಚ್ಚರಿಸಿದ್ದಾರೆ. ಅವರಿಗೆ ಸಿರಿಯ ಬಗ್ಗೆ ತಿರಸ್ಕಾರ, ಹೆಣ್ಣಿನ ಬಗ್ಗೆ ಅನುಕಂಪಗಳಿವೆ! ಸಂಸಾರ ಮಾಯೆಯೆಂದು ಹೇಳುವರಾದರೂ ಅದು ತ್ಯಾಜ್ಯವೆಂಬ ನಿಲುವಲ್ಲ. ಕಮಲ ಪತ್ರದ ಮೇಲಿನ ನೀರ ಹನಿಯಂತೆ ಸಂಸ್ಕಾರಕ್ಕೆ ಅಂಟಿಯೂ ಅಂಟದಂತಿರಬೇಕು ಎಂಬುದು ಅವರ ದೃಢ ನಿಲುವು!!.

ಅವರ ಒಲವು, ನಿಲವುಗಳನ್ನು ಪರಾಮರ್ಶಿಸಿದಾಗ ದಾಸರು ಅಂದಿನ ಸಾಮಾಜಿಕ ಪರಿಸ್ಥಿತಿಗೆ ಹೇಗೆ ಸ್ಪಂದಿಸು ತ್ತಿದ್ದರೆಂಬುದನ್ನು ಮನಗಾಣಬಹುದಾಗಿದೆ. ಪುರಂದರ ದಾಸರು ಹುಟ್ಟಿದಾಗ ಎಂದರೆ ಕ್ರಿ.ಶ. ೧೪೮೪ರಲ್ಲಿ ವಿಜಯ ನಗರದಲ್ಲಿ ಸಂಗಮವಂಶದ ಆಳ್ವಿಕೆ ಮುಗಿದು ಸಾಳುವ ನರಸಿಂಹನ ಆಳ್ವಿಕೆ ಪ್ರಾರಂಭವಾಗಿತ್ತು. ಆತನು, ಒಡೆದು ಹೋಗುವ ಸ್ಥಿತಿಯಲ್ಲಿದ್ದ ಸಾಮ್ರಾಜ್ಯವನ್ನು ಮತ್ತೆ ಒಂದು ಗೂಡಿಸಿ ಬಲಿಷ್ಠಗೊಳಿಸಿದನು. ಆದರೆ ೧೫೦೩ರಲ್ಲಿ ಆತ ತೀರಿಕೊಂಡನು. ಆನಂತರ ಆತನ ಮಕ್ಕಳಾದ ಇಮ್ಮಡಿ ನರಸಿಂಹ ಮತ್ತು ವೀರ ನರಸಿಂಹ ಅವರ ಆಳ್ವಿಕೆ ನಡೆಯಿತಾದರೂ ಅವರ ದೌರ್ಬಲ್ಯದಿಂದಾಗಿ ಸೇನಾಪತಿ ತುಳುವ ನರಸನಾಯಕನ ಕೈಯಲ್ಲಿ ಆಡಳಿತ ಸೂತ್ರಗಳು ಕೇಂದ್ರೀಕೃತವಾಗಿದ್ದವು. ಆದರೂ ಸಾಮ್ರಾಜ್ಯದ ಅನೇಕ ಆಶ್ರಿತ ರಾಜರು ಸ್ವತಂತ್ರರಾಗಲು ಹವಣಿಸುತ್ತಿದ್ದುದಲ್ಲದೆ, ಅವರಲ್ಲೇ ಕೆಲವರು ತಾವೇ ಸಾಮ್ರಾಜ್ಯದ ನಿಜವಾದ ವಾರಸುದಾರರು ಎಂಬ ತಮ್ಮ ಹಕ್ಕೊತ್ತಾಯವನ್ನು ಮಂಡಿಸ ತೊಡಗಿದರು. ಅಲ್ಲದೆ, ಅದೀಗ ಬಿಜಾಪುರದ ಸ್ವತಂತ್ರ ಸುಲ್ತಾನನಾಗಿದ್ದ ಯುಸೂಫ ಆದಿಲ್‌ಖಾನನು ವಿಜಯನಗರವನ್ನು ಕಬಳಿಸಲು ಹೊಂಚು ಹಾಕುತ್ತಿದ್ದನು. ಸಮಾಜದಲ್ಲಿ ಇಂತಹ ಅನಿಶ್ಚಿತ ಪರಿಸ್ಥಿತಿ ಯಲ್ಲಿದ್ದಾಗ, ಶ್ರೀನಿವಾಸ ನಾಯಕರು ಇನ್ನೂ ಹರಿದಾಸ ದೀಕ್ಷೆ ಪಡೆದು, ಪುರಂದರ ದಾಸರಾಗಿರಲಿಲ್ಲ. ಮುಂದೆ, ಅವರು ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಸಾಮಾಜಿಕ ನಿಲುವು ಈ ಪರಿಸ್ಥಿತಿಯ ಪ್ರಭಾವದಿಂದ ದೂರ ಉಳಿಯಲು ಸಾಧ್ಯವಿರಲಿಲ್ಲ. ಆದರೆ, ೧೫೦೯ರಲ್ಲಿ ಕೃಷ್ಣ ದೇವರಾಯನು ಪಟ್ಟಕ್ಕೆ ಬಂದ ನಂತರ ಪರಿಸ್ಥಿತಿ ತುಂಬಾ ಸುಧಾರಿಸಿತು. ೧೫೩೦ರಲ್ಲಿ ಕೃಷ್ಣದೇವರಾಯನ ಅಂತ್ಯವಾಗುವವರೆಗೂ ವಿಜಯನಗರ ಸಾಮ್ರಾಜ್ಯದಲ್ಲಿ ಹೊನ್ನಿನ ಹೊಗೆ ಹಾಯಿತು. ಸಮಾಜ ಸುಭಿಕ್ಷವಾದುದಲ್ಲದೆ, ಸುಭದ್ರವೂ ಆಯಿತು. ಹಿಂದೂ ಸಮಾಜ ಎಲ್ಲಾ ವಿಧದಲ್ಲೂ ಗರಿಗೆದರಿ ಮೆರೆದ ಕಾಲ!

ಮುಂದೆ, ಶ್ರೀನಿವಾಸ ನಾಯಕರು ವಿಜಯನಗರಕ್ಕೆ ಬಂದು, ವ್ಯಾಸರಾಯನಿಂದ ಹರಿದಾಸ ದೀಕ್ಷೆ ಪಡೆದು ಪುರಂದರದಾಸರಾದರು. ಚಕ್ರವರ್ತಿ ಕೃಷ್ಣದೇವರಾಯನ ಗುರು ಗಳಾಗಿದ್ದ ವ್ಯಾಸರಾಯರು ಹಂಪೆಯಲ್ಲೇ ಇರುತ್ತಿದ್ದರು. ಅವರ ಜೊತೆಗೇ ಇದ್ದ ಪುರಂದರದಾಸರಿಗೆ, ವ್ಯಾಸರಾಯರ ಜೊತೆಗೆ ಅವರಿಗೆ ಬೇಡವಾಗಿದ್ದರೂ ರಾಜಸನ್ಮಾನ, ಕೃಪಾಶ್ರಯ ದೊರಕಿರಬೇಕು. ಅರಸನು ಶ್ರೀವೈಷ್ಣವ ಧರ್ಮದ ದೀಕ್ಷೆ ಪಡೆದಿದ್ದರೂ ಶೈವ ಸಂಪ್ರದಾಯಕ್ಕೂ ನಡೆದು





ಕೊಳ್ಳುತ್ತಿದ್ದನು. ಇದರ ಪ್ರಭಾವ ಜನತೆಯ ಮೇಲೂ ಆಗಿದ್ದು ಸಮಾಜದಲ್ಲಿ ಇತರ ಧರ್ಮಗಳ ಬಗ್ಗೆಯೂ ಉದಾರ ಮನೋಭಾವ ಬೆಳೆದು ಬಲಿತ ಕಾಲ! ಇದಕ್ಕೆ ಪುರಂದರ ದಾಸರೇ ಸಾಕ್ಷಿ. ತಾವು ಸ್ವತಃ ಮಧ್ವ ಸಂಪ್ರದಾಯಕ್ಕೆ ಸೇರಿದ ವರಾದರೂ 'ಶಿವದರುಶನ ತಮಗಾಯಿತೆಂದು' ಹಿಗ್ಗಿದರು. 'ಜಂಗಮರು ತಾವೆಂದೂ ವೀರಭದ್ರನ ಪ್ರಿಯಭಕ್ತರೆಂದೂ' ಬಣ್ಣಿಸಿಕೊಂಡರು. ಸದ್ಗುರುವು ತನ್ನನ್ನು ಫಕೀರನನ್ನಾಗಿ ಮಾಡಿದನೆಂದು ಹಾಡಿದರು. 'ತುರುಕರು ಕರೆದರೆ ಉಣಬಹುದೆಂದು' ಮಾರ್ಮಿಕವಾಗಿ ಸೂಚಿಸಿದರು. 'ಅರಿತು ಬಂದನೆಲ್ಲಿ, ಪುರಂದರ ವಿಠಲನಲ್ಲದಿಲ್ಲಲ್ಲಾ' ಎಂದು ಹೇಳಿ, ದೇವರು ಒಬ್ಬನೇ, ಹೆಸರು ಯಾವುದಾದರಿರಲಿ. ಅವನ ಭಕ್ತರೆಲ್ಲ ಮಾನವರೇ ಎಂಬುದನ್ನು ಅವರು ತಮ್ಮ ಕೃತಿಗಳಲ್ಲಿ ಸಾರಿದರು. ಈ ಉದಾರ ಮನೋಭಾವ, ದೂರ ದೃಷ್ಟಿಗಳನ್ನು ಪುರಂದರದಾಸರ ಪೂರ್ವದಲ್ಲಾಗಲೀ, ಆನಂತರ ಬಂದ ಹರಿದಾಸರಲ್ಲಾಗಲೀ ಕಾಣಲಾಗದು!.

ಕ್ರಿ.ಶ. ೧೫೩೦ರಲ್ಲಿ ಕೃಷ್ಣದೇವರಯಾನ ಅವಸಾನವಾದ ನಂತರ ಸಮಾಜದ ನೆಮ್ಮದಿ ಮತ್ತೆ ಅಲ್ಲೋಲಕಲ್ಲೋಲ ವಾಯಿತು. 'ನೆಚ್ಚದಿರಿ ಈ ಭಾಗ್ಯ ಸ್ಥಿರವಲ್ಲ'ವೆಂದು ಜನರನ್ನು ಎಚ್ಚರಿಸಿದರು. ಮುಂದೆ ಬಂದ ಅರಸ ಅಚ್ಯುತನ ಕಾಲದಲ್ಲಿ ಸಾಮ್ರಾಜ್ಯದಲ್ಲಿ ಶಾಂತಿ ದೂರವಾಗಿ, ದಂಗೆ, ದಾಳಿ, ಯುದ್ಧ ಗಳ ಪ್ರಸಕ್ತಿ ಪ್ರಾರಂಭವಾಯಿತು. ಅರಮನೆಯಲ್ಲಿ ಅಂತಃ ಕಲಹಗಳು, ಆಡಳಿತದಲ್ಲಿ ಅವ್ಯವಸ್ಥೆ ದಿನನಿತ್ಯದ ಹಾಡಾಯಿತು. ಹೀಗಾಗಿ ಸಮಾಜದಲ್ಲಿ ನೆಮ್ಮದಿ, ಸುಖ ಸಂತಸಗಳು ಹಗಲುಗನಸುಗಳಾದವು. ಇಂತಹ ಸಂಧಿಕಾಲದಲ್ಲಿ ಪುರಂದರ ದಾಸರು ತಮ್ಮ ಕರ್ತವ್ಯವೆಂದು ಭಾವಿಸಿ, ವ್ಯಕ್ತಿ ಜೀವನದಲ್ಲಿ ಆಧ್ಯಾತ್ಮದಿಂದ ನೆಮ್ಮದಿ ಪಡೆದುಕೊಳ್ಳುವ ಬಗೆಯನ್ನು ಜನರಿಗೆ ತಿಳಿಯಪಡಿಸಲು ಹೆಣಗಿದರು, ಅವರ ಹಲವಾರು ಕೀರ್ತನೆಗಳಲ್ಲಿ ಅಂದಿನ ಸಮಾಜದ ದುಗುಡವನ್ನು ಕಾಣಬಹುದು.

ಅಚ್ಯುತರಾಯನು ೧೫೪೨ರಲ್ಲಿ ತೀರಿಕೊಂಡನು. ಆನಂತರ, ಅವನ ಮೈದುನರಾದ ಸಕಲ ಸೋದರರ ದುರಾಡಳಿತ ಪ್ರಾರಂಭವಾಯ್ತು. ಆಗ ದಾಸರು 'ಸತ್ಯವಂತ ರಿಗಿದು ಕಾಲವಲ್ಲ. ದುಷ್ಟಜನರಿಗೆ ಸುಭಿಕ್ಷ ಕಾಲ' ಎಂದು ತುಂಬಾ ಮನನೊಂದು ನುಡಿದರು. ಅಲ್ಲದೆ, 'ಒತ್ತಿ ಹಿಡಿದ ಕಂಬ ವ್ಯರ್ಥವಾಯಿತು. ಬಾವಿ ತೋಡಲು ಬೇತಾಳ ಹೊರಟಿತು. ಅರ್ಥಿಯ ಸಂಸಾರ ಅಡವಿ ಪಾಲಾಯಿತು'. ಎಂದು ದಾಸರು ಬಹಳವಾಗಿ ಪರಿತಪಿಸುವಂತಾಯ್ತು. 'ಬಂದದ್ದೆಲ್ಲಾ ಬರಲಿ ಗೋವಿಂದನ ದಯವೊಂದಿರಲಿ' ಎಂದು ಸಮಾಧಾನ ಪಟ್ಟುಕೊಂಡರೂ, 'ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ, ನಿಶ್ಚಯವೆಚ್ಚರಿಕೆ' ಎಂದು ಜನರನ್ನು ಎಚ್ಚರಿಸಿದರು.

ಮೇಲ್ಕಂಡ ಮಾತುಗಳಲ್ಲಿ, ದಾಸರ ದೃಷ್ಟಿ ಆಧ್ಯಾತ್ಮಿಕ ವಾದುದೆಂದು ಕಂಡುಬಂದರೂ ಜನರ ಒಲವುಗಳನ್ನು ತಿದ್ದುವುದು ಅವುಗಳ ಮಹೋದ್ದೇಶವಾಗಿತ್ತು!. ಸಮಾಜ ಜೀವಿಯಾದ ಮಾನವನು ಆಡಳಿತದ ಕಡೆ ಕಣ್ಣು ಹಾಯಿಸಿ, ತನ್ನ ಬದುಕಿನ ಸುಖದುಃಖಗಳಿಗೆ ಕಷ್ಟ ನಿಷ್ಠುರಗಳಿಗೆ, ಬಡತನ ಸಿರಿತನಗಳಿಗೆ ಆಡಳಿತವೇ ಹೊಣೆಯೆಂದು ಬಗೆಯುವುದು ಅತಿ ಸಹಜ ಸಂಗತಿ! ಆಡಳಿತ ನಡೆಸುವವರ ಅಥವಾ ಅರಸರ ದಯೆಯಾದರೆ ತಮ್ಮ ಕಷ್ಟ ಕಾರ್ಪಣ್ಯಗಳು ಬಗೆಹರಿಯುವುವೆಂಬ ಮನೋಭಾವದಿಂದ ನೆಮ್ಮದಿಯು ದೊರಕಲಾರದೆಂದು ಅವರು ಜನರಿಗೆ ಮನದಟ್ಟು ಮಾಡಿ ಕೊಡಲು ಹೆಣಗಿದರು. 'ದುಗ್ಗಾಣಿ ಎಂಬುದು ದುರ್ಜನ ಸಂಗ' ಎಂಬುದನ್ನು ಜನರಿಗೆ ತಿಳಿಸಿ ಹೇಳಿದರು. ಇಂತಹ ಜನರ ಮನೋಭಾವವನ್ನು ಆಧ್ಯಾತ್ಮದ ಕಡೆಗೆ ತಿರುಗಿಸಿ, ಅವರ ಆಚಾರ, ವಿಚಾರ, ನೀತಿಗಳನ್ನು ಸ್ಥಿರಗೊಳಿಸಿ, ವ್ಯಕ್ತಿ ಜೀವನದಲ್ಲಿ ಶುದ್ಧಿ, ಸ್ಥೈರ್ಯ, ಧೈರ್ಯಗಳನ್ನು ಮೂಡಿಸಲೆಂದೇ ಅವರು ಹರಿದಾಸರಾಗಿ ಊರೂರು ತಿರುಗಿದರು!.

ಪುರಂದರದಾಸರ ಆರಾಧ್ಯ ದೈವವಾದ ವಿಜಯವಿಠಲನ ಮಂದಿರದ ಬಳಿಯೇ ಹರಿಯುತ್ತಿರುವ ತುಂಗಭದ್ರೆಯ ದಡದಲ್ಲಿ 'ಪುರಂದರಮಂಟಪ'ವಿದೆ. ದಾಸರು ಹಂಪಿ ಯಲ್ಲಿದ್ದಷ್ಟೂ ಕಾಲವೂ ಈ ಮಂಟಪದಲ್ಲಿಯೇ ಜೀವಿಸುತ್ತಿ ದ್ದರೆಂದು ನಂಬಲಾಗಿದೆ. ಪುರಂದರದಾಸರು ಕ್ರಿ.ಶ. ೧೫೬೪ ರಲ್ಲೊಂದು ದಿನ ತಮ್ಮ ತಾಳ, ತಂಬೂರಿಗಳನ್ನು ನುಡಿಸುತ್ತಾ ತುಂಗಭದ್ರೆಯನ್ನು ಹೊಕ್ಕವರು ಅಲ್ಲಿಯೇ ಹಾಗೆಯೇ ಕಾಣದಾದರು ಎಂಬ ಐತಿಹ್ಯವಿದೆ !.

❑



# ಬದುಕೊಂದು ಪಯಣ

–ಈಶ್ವರ ಮಂಟೂರ *

ನಮ್ಮ ಬದುಕೊಂದು ದೀರ್ಘವಾದ ಪಯಣ. ಅದಕ್ಕೆ ನೂರಾರು ಮುಖಗಳು–ಗುರಿಗಳು. ಈ ಪಯಣದಲಿ ಹೊಸಗುರಿಯನ್ನು ಅರಸುತ್ತಲೇ ಇರಬೇಕು. ಹೊಸ ಕನಸಿನ ಹಾದಿ ಹುಡುಕಬೇಕು. ಗುರಿ ಸಾಧನೆಗಾಗಿ ಕಲ್ಲುಮುಳ್ಳುಗಳ ದಾರಿ ಸವೆಸಬೇಕು. ಶಿಲ್ಪಿಗನ ಸಾವಿರಾರು ಉಳಿಯ ಏಟುಗಳಿಂದಾಗಿಯೇ ಕಲ್ಲಿನಲ್ಲಿ ಮೂರ್ತಿ ಮೂರ್ತಗೊಳ್ಳುವುದು. 'ಹರ ತನ್ನ ಭಕ್ತರ ತಿರಿವಂತೆ ಮಾಡುವ....' ಎಂಬುದು ಜಗಜ್ಜನಿತವಾದ ಮಾತು. ಜೀವನ ಇದೊಂದು ಗಣಿತ. ಸ್ನೇಹಿತರನ್ನು ಕೂಡಿಸಿ, ದುರ್ಗುಣಗಳನ್ನು ಕಳೆದು, ಸಂತೋಷವನ್ನು ಗುಣಿಸಿ, ದುಡಿದುದನ್ನು ಭಾಗಿಸುವುದು, 'ಗಣಿತವಿದನು ಕೂಡಿ ಕಳೆಯ ಬಲ್ಲಾತನೆ ತ್ರಿನಯನನೆನಿಪನು' ಎಂದು ನಿಜಗುಣರು ವಿವರಿಸುತ್ತಾರೆ.

ಬಯಸಿದಾಕ್ಷಣ ಬಯಕೆ ಈಡೇರದು. ಎಲ್ಲದಕ್ಕೂ ಸಾಧನೆ ಅವಶ್ಯ. ಸಾಧನೆಯೊಂದಿಗೆ ಬದುಕಿನ ಮಜಲುಗಳನ್ನು ಏರಿದಾಗ ಸತ್ಯದರ್ಶನವಾಗುವುದು. ಸಾಧನೆಯಿರದೆ ಬಯಕೆ ಬಯಕೆಯಾಗಿಯೇ ಉಳಿಯುವುದು.

*ಹುಟ್ಟಿದ ಮಗು ಗಗನಕೇರಬಹುದೇ?*
*ನೆಟ್ಟ ಸಸಿ ತಕ್ಷಣ ಫಲವೀಯಬಹುದೇ?*
*ಈಜು ಬಾರದೆ ಕಡಲ್ಗಾಲುವೆ ದಾಟಬಹುದೇ?*
*ಅಳುವ ಶಿಶು ಕೂಡಲೇ ಸಂಗೀತಜ್ಞನಾಗಬಹುದೇ?*
*ಆಗಬಹುದು ಹೇಮ ಕೂಟೇಶಾ*
*ನಿನ್ನ ನಂಬಿ ಸಾಧನೆ ಮಾಡಿದರೆ.....!*

ದೇವನಿಷ್ಠೆ ಪ್ರಾಮಾಣಿಕ ಪ್ರಯತ್ನವೇ ಪ್ರಗತಿಗೆ ಮೂಲ. ಕ್ರಮವರಿತು ಸಾಧನಾಪಥ ಸಾಗಿದವ ಸಾಂಬನೆನಿಸುವನು. ಸಾಧನಾ ಪಥಿಕನು ರೆಕ್ಕೆ ಸೋತು ಪುಕ್ಕ ಕಳಚಿ ಸುಕ್ಕುಗಟ್ಟಿದ ಮುಖದವನಾಗಿ ಬಿಕ್ಕಿ ಬಿಕ್ಕಿ ಅತ್ತರೆ ಸಾಧಕನೆನಿಸಲಾರನು. ಆಳದ ಸಾಗರಕ್ಕೆ ಇಳಿದು ಗಾಳಕ್ಕೆ ಸಿಲುಕಿ ಗೋಳಾಡುವಂತಾಗಬಾರದು. ಅದಕ್ಕಾಗಿ ದೊಡ್ಡವರ ಬೆನ್ನಿಗೆ ಬಿದ್ದು. ಮಹಾತ್ಮರ ಪ್ರೇರಣೆಯೊಂದಿಗೆ ಗುರುವಿನ ಕೃಪಾಕಟಾಕ್ಷ ಪಡೆದು ಹಿಡಿದ ಗುರಿಯತ್ತ ಛಲದೊಂದಿಗೆ ಹೆಜ್ಜೆ ಹಾಕಬೇಕು ಅಂಥ ಮಹಾನುಭಾವರು ತೋರಿದ ಪಥವೇ ಶಿವಪಥ. ಹೀಗೆ ನಾವು ಸಾಗದೆ, ನಮಗೆ ತೋರಿದ ದಾರಿಯಲ್ಲಿ ಪಯಣಿಸಲೆತ್ನಿಸಿದರೆ ಪೂರ್ವದಿಕ್ಕನ್ನು ಬಯಸಿ, ಪಶ್ಚಿಮದತ್ತ ಸಾಗಿದಂತಾಗುತ್ತದೆ. ಅಂತೆಯೇ ನಮಗೆ ಗುರಿ ಇರಲಿ; ತೋರುವ ಗುರುವೂ ಇರಲಿ !

ಮನುಷ್ಯ ಜೀವನವು ಸಮಸ್ಯೆಗಳ ಸರಮಾಲೆ, ಸಮಸ್ಯೆಗಳಿಂದಲೇ ಬದುಕು ಬಲಗೊಂಡಿದೆ. ಸಂತರು–ಶರಣರು, ವಿಶ್ವದಾರ್ಶನಿಕರು, ತಮ್ಮ ಜೀವನದಲ್ಲಿ ಮುಗಿಲು ಹರಿಯುವಂಥ ಭೂಮಿ ಬಿರಿಯುವಂಥ ಸುನಾಮಿಯಂತಹ ಬಿರುಗಾಳಿ ಬೀಸಿದರೂ ಬೆದರದೆ ಬೆಚ್ಚದೆ ಭಾವ ಬದಲಿಸದೆ ಬದುಕನ್ನು ಕಟ್ಟಿದರು. ಬದುಕಿನ ಉರಿತದುರಿತಗಳನ್ನು, ಏರಿಳಿತಗಳನ್ನು ಮಿಳಿತವಾಗಿಸಿ ಸ್ವಾಗತಿಸಿದರು. ಬಣ್ಣದ ಬದುಕಿಗೆ ಮಾರು ಹೋಗದೆ, ಭವ ಪ್ರಪಂಚವನ್ನು ಶಿವ ಪ್ರಪಂಚವನ್ನಾಗಿಸಿ, 'ಶಿವಪ್ರಪಂಚಿಕ'ರಾದರು. ತಮ್ಮ ಸುಂದರ ಬದುಕಿಗೆ ತಾವೇ ಶಿಲ್ಪಿಗಳಾದರು. ಅವರಂತೆ ನಾವೂ ನಮ್ಮನ್ನು ರೂಪಿಸಿಕೊಳ್ಳಲು ಕಲಿಯಬೇಕು. ಭಗವಂತನ ಅಡಿಗೆ ಅಡುಗೆಯಾಗಿ, ಅವನಿಗೆ ತೊಡುಗೆಯಾಗಿ, ಆತನ ಸಿರಿಮುಡಿಗೆ ಮಲ್ಲಿಗೆಯಾಗಬೇಕು. 'ಎಷ್ಟು ವರುಷ ಬದುಕಿದೆವು ಎನ್ನುವುದಕ್ಕಿಂತ ಹೇಗೆ ಬದುಕಿದೆವು ಎಂಬುದೇ ಮಹತ್ವದ್ದು' ಎಂಬ ಆಶಯದ ಮಾತುಗಳನ್ನು ಕನ್ನಡದ ಮೋಡಿಗಾರ ಕವಿ ಬೇಂದ್ರೆಯವರು ಆಡಿದ್ದಾರೆ.

ನಮ್ಮ ಗುರಿ ಸಾಧನೆಗೆ ನಾವೇ ಆದರ್ಶರಾಗಿರಬೇಕೇ ವಿನಃ ಅನ್ಯರಲ್ಲ. ನಮ್ಮ ಕೆಲಸ ಕಾರ್ಯ ನಮಗೆ; ಹೆರವರದು ಹೆರವರಿಗೆ, ನವಿಲು ಕುಣಿಯುವುದನ್ನು ಕಂಡು ಕೆಂಬೂತ ಕುಣಿದರೆ ಅಂದವಾಗಲಾರದು. ಬದುಕಿನ ಗುರಿ ಸಾಧನೆಗೆ ಸತತ ಪರಿಶ್ರಮ ಅವಶ್ಯ. ಪರಿಶ್ರಮಿಸದ ಆಲಸಿಗನಿಂದ ಯಾವ ಮಹತ್ಸಾಧನೆಯನ್ನು ನಿರೀಕ್ಷಿಸಲಾಗದು. ಆಲಸಿಗನೊಬ್ಬ ಕಟ್ಟೆಯ ಮೇಲೆ ಮಲಗಿದ್ದ ಸಮಯದಲ್ಲಿ

* ಬಸವಜ್ಞಾನ ಗುರುಕುಲ, ಹುನ್ನೂರ, ಮಧುರಖಂಡಿ, ಜಮಖಂಡಿ ತಾ॥, ಬಾಗಲಕೋಟೆ ಜಿಲ್ಲೆ.





ಒಬ್ಬಾತ ಬಂದು ಅವನಿಗೆ ಊರ ಹೊರಗಿನ ಮಠದಲ್ಲಿ ಬಾಳೆಹಣ್ಣು ಕೊಡುತ್ತಿದ್ದಾರೆ, ನೀನೂ ತೆಗೆದುಕೊಂಡು ಬಾ ಎಂದು ತಾನು ತಂದ ಬಾಳೆಹಣ್ಣು ತೋರಿಸಿದ. ಆಲಸಿ ಯುವಕ 'ಮಠದಲ್ಲಿ ಬಾಳೆಹಣ್ಣನ್ನು ಸುಲಿದು ಕೊಡುತ್ತಾರೋ ಇಲ್ಲ ಹಾಗೆಯೇ ಕೊಡುತ್ತಾರೋ' ಎಂದು ಕೇಳಿದನಂತೆ. ಇಂಥ ವ್ಯಕ್ತಿಯೊಬ್ಬ ಹೇಗೆ ಸಮರ್ಥ ಸಾಧಕನಾಗಬಲ್ಲ? ಕ್ರಿಯಾಶೀಲ, ದೃಢನಿರ್ಧಾರದ ವ್ಯಕ್ತಿಯೇ ತನ್ನ ಗುರಿಯನ್ನು ಛಲದೊಂದಿಗೆ ಸಾಧಿಸಬಲ್ಲ.

ಬಂಧುಗಳೇ, ಇದೇ ಬಂಗಾರದ ಬದುಕಿಗೆ ಬೆನ್ನುಡಿ. 'ಮಾನವನ ಬದುಕು ಗೋಪುರದ ಗಡಿಯಾರವಿದ್ದಂತೆ. ಅದನ್ನು ಕತ್ತೆತ್ತಿಯೇ ನೋಡಬೇಕು. ಕತ್ತೆತ್ತಿ ನೋಡಬೇಕೆನ್ನುವುದು ಕತ್ತಿಗೆ ಗೊತ್ತಿರಬೇಕು. ಬರೀ ಗೊತ್ತಿದ್ದರೆ ಸಾಲದು, ಮುಳ್ಳುಗಳ ಲೆಕ್ಕಾಚಾರ ತಿಳಿದಿರಬೇಕು'– ದಾರ್ಶನಿಕರೊಬ್ಬರ ಈ ಬೆಳಕಿನ ನುಡಿ ನಮ್ಮೆಲ್ಲರ ಕಣ್ಣು ತೆರೆಸಿದೆ. ಹಿಮಾಲಯದ ಬೆಟ್ಟದಲ್ಲಿ ಚಮರೀ ಮೃಗ ಕಾಯುತ್ತಲಿದ್ದ ತೇನಸಿಂಗನ ಹಲವು ವರುಷಗಳ ಸಾಧನೆ ಹಿಮಾಲಯದ ತುತ್ತ ತುದಿಯನ್ನು ಮೆಟ್ಟುವಂತಾಯಿತು. ನೀಲ್ ಆರ್ಮಸ್ಟ್ರಾಂಗ್‌ನ ಆತ್ಮವಿಶ್ವಾಸದ ಸಾಧನೆ ಚಂದ್ರನ ಮೇಲೆ ಅಡಿ ಇಡಿಸುವಂತಾಯಿತು. ಬಡ ರೈತನ ಮಗನಾದ ಲಿಂಕನ್‌ನ ಸಾಧನೆ ಅವರನ್ನು ಅಮೆರಿಕೆಯ ಅಧ್ಯಕ್ಷರನ್ನಾಗಿಸಿತು. ದಡ್ಡ ವಿದ್ಯಾರ್ಥಿ ಎಂದು ಶಾಲೆಯಿಂದ ಹೊರಹಾಕಲ್ಪಟ್ಟ ಎಡಿಸನ್‌ನ ಸಂಶೋಧನಾತ್ಮಕ ಬುದ್ಧಿ ಆತನನ್ನು ಜಗತ್ಪ್ರಸಿದ್ಧ ವಿಜ್ಞಾನಿಯನ್ನಾಗಿಸಿತು. ಬೀದಿಯ ಬೆಳಕಿನಲ್ಲಿ ಓದಿ ಪಾಸಾದ ಎಂ.ವಿಶ್ವೇಶ್ವರಯ್ಯನವರ ಸಾಧನೆ ಶ್ರೇಷ್ಠ ಇಂಜಿನಿಯರಾಗಿ, ಪ್ರಾಮಾಣಿಕತೆಯ ದಿವಾನರಾಗಿ ಹೊರಹೊಮ್ಮುವಂತಾ ಯಿತು ಎಂ.ಎಸ್. ಸುಬ್ಬಲಕ್ಷ್ಮಿ, ಗಂಗೂಬಾಯಿಯವರ ಸಾಹಸದ ಸಾಧನೆಗಳು ಸಂಗೀತ ಸಾಮ್ರಾಜ್ಞಿಯರ ನ್ನಾಗಿಸಿತು. ಪಂಡಿತ ಪುಟ್ಟರಾಜರ ಕಷ್ಟ ಸಹಿಷ್ಣುತೆ ಅಂಥ ಅನಾಥರ ಬಾಳಿಗೆ ಆಶಾಕಿರಣವಾಯಿತು. ನಮ್ಮ ಭವಿಷ್ಯ ಅಂಗೈರೇಖೆಗೊಳಗಿರದೆ ನಮ್ಮ ರಟ್ಟೆಯಲ್ಲಿದೆ ಎಂಬುದನ್ನು ಮನಗಾಣಬೇಕಿದೆ.

'ಏನಾದರೂ ಮಾಡುತಿರು ತಮ್ಮ, ಸುಮ್ಮನೆ ಕೂತು ನೆಲಕೆ ನೀ ಭಾರವಾಗಬೇಡ. 'ನೆಲದ ಭಾರ ಕಳೆಯಲು ಏನಾದರೂ......' ಎಂ. ಗೋಪಾಲಕೃಷ್ಣ ಅಡಿಗರ ಕವಿತೆಯ ಸಾಲುಗಳು ನಮಗೆ ಪ್ರೇರಕಶಕ್ತಿಯನ್ನೀಯಬೇಕು.

ಬದುಕಿನ ಪಯಣದಲ್ಲಿ ಒಳ್ಳೆಯವನಾಗುತ್ತ, ಒಳ್ಳೆಯದನ್ನು ಮಾಡುತ್ತ, ಸಾಹಸದ ಬುದ್ಧಿಯಲ್ಲಿ, ಸೌಹಾರ್ದ ಭಾವದಲ್ಲಿ, ಎಲ್ಲವನ್ನು ಗೆಲ್ಲುವಂಥ ಛಾತಿ ಬೆಳೆಸಿಕೊಂಡು ಎಲ್ಲರನ್ನು ಮೆಚ್ಚುವ ಎಲ್ಲರನ್ನು ಮೆಚ್ಚಿಸುವ ಎಲ್ಲರೊಳಗೆ ಸಲ್ಲುವಂತಹ ನೀತಿ ನಮ್ಮದಾಗಬೇಕು. ಬದುಕಿನ ಮೌಲ್ಯ ಉನ್ನತ ಗುರಿಗಳಿಂದ ಹೆಚ್ಚುವುದು ಬೆಟ್ಟ ಹತ್ತುವ ಗುರಿಯಿದ್ದಾಗ ಮಾತ್ರ ಕಡೆಯ ಪಕ್ಷ ಸಣ್ಣ ಗುಡ್ಡವನ್ನಾದರೂ ಏರಬಹುದು ಎಂಬುದು ಬಲ್ಲವರ ನುಡಿ. ❑

## ಶ್ರದ್ಧಾಂಜಲಿ



ಶ್ರೀಮಠದ ವಿದ್ಯಾರ್ಥಿಗಳಾಗಿದ್ದ, ಲೋಕೋಪಯೋಗಿ ಇಲಾಖೆಯಲ್ಲಿ ಸುದೀರ್ಘ ಸೇವೆ ಸಲ್ಲಿಸಿ, ನಿವೃತ್ತಿಯ ನಂತರ ಶ್ರೀಮಠದ ಲೆಕ್ಕ ವಿಭಾಗದ ಕಾರ್ಯಾಲಯದಲ್ಲಿ ಸೇವೆ ಸಲ್ಲಿಸುತ್ತ ಬಂದಿದ್ದ ಶ್ರೀಯುತ ಎಂ.ಬಿ. ಹೊನ್ನಪ್ಪನವರು ದಿನಾಂಕ ೩೧-೧೨-೨೦೧೦ರಂದು ಲಿಂಗೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ' ಅತೀವ ಸಂತಾಪವನ್ನು ಅನುಭವಿಸಿದಂತಾಗಿದೆ. ಶ್ರೀಯುತರು ದಕ್ಷತೆಗೆ, ಪ್ರಾಮಾಣಿಕತೆಗೆ, ಸ್ನೇಹಭಾವಕ್ಕೆ ಹೆಸರಾಗಿದ್ದರು. ಪರಮಪೂಜ್ಯ ಶ್ರೀಶ್ರೀಗಳವರಲ್ಲಿ ಅನನ್ಯ ನಿಷ್ಠೆಯುಳ್ಳವರಾಗಿದ್ದರು.

ಶ್ರೀ ಎಂ.ಬಿ. ಹೊನ್ನಪ್ಪನವರು ಧರ್ಮಪತ್ನಿಯನ್ನು, ಪುತ್ರರನ್ನು, ಅಪಾರ ಬಂಧುಬಳಗವನ್ನು, ಅಭಿಮಾನೀ ಗೆಳೆಯರನ್ನು ಅಗಲಿದಂತಾಗಿದೆ. ಶ್ರೀಯುತರ ಆತ್ಮಕ್ಕೆ ಶ್ರೀ ಸಿದ್ಧಗಂಗಾ ಗುರುಪರಂಪರೆ ಚಿರಶಾಂತಿಯನ್ನು ನೀಡಲೆಂದು ಮತ್ತು ಅವರ ಕುಟುಂಬ ವರ್ಗದವರಿಗೆ ಶ್ರೀಯುತರ ಅಗಲಿಕೆಯ ದುಃಖವನ್ನು ಸಹಿಸುವ ಧೈರ್ಯವನ್ನು ಕೊಡಲಿ ಎಂದು ಪ್ರಾರ್ಥಿಸುತ್ತ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ 'ಸಿದ್ಧಗಂಗಾ'.

# ಸಾಹಿತ್ಯ ಮತ್ತು ಇಂದಿನ ಪೀಳಿಗೆ

-ರೇಣುಕಾರಾಧ್ಯ ಎಸ್. *

ಜಗತ್ತಿನಲ್ಲಿ ಮೊಟ್ಟಮೊದಲು ಸಾಹಿತ್ಯ ಸೃಷ್ಟಿಸಿದವರು ಭಾರತೀಯರು. ವೇದೋಪನಿಷತ್ತುಗಳು ಜಗತ್ತಿನ ಮೊಟ್ಟ ಮೊದಲ ಸಾಹಿತ್ಯಕೃತಿಗಳು. ನಂತರದ ಕಾಲಘಟ್ಟದಲ್ಲಿ, ವೇದಾಂಗಗಳು, ಅರಣ್ಯಕಗಳು, ಬ್ರಾಹ್ಮಣಗಳು, ರಾಮಾಯಣ, ಮಹಾಭಾರತ, ಅಷ್ಟಾದಶ ಪುರಾಣಗಳು, ಉಪಪುರಾಣಗಳು, ಸಂಸ್ಕೃತ ಪಾಲಿ ಭಾಷೆಯಲ್ಲಿ ಸೃಷ್ಟಿಸಿದ ಅಪರಿಮಿತ ಸಾಹಿತ್ಯದ ಜೊತೆಗೆ ದೇಶೀಯ ಭಾಷೆಗಳು, ಕನ್ನಡ ತಮಿಳು, ತೆಲುಗು ಮೊದಲಾದ ಪ್ರಾಚೀನ ಭಾಷೆಗಳಲ್ಲಿ ಅಸಂಖ್ಯ ಅಪರಿಮಿತ ಸಾಹಿತ್ಯದ ಸೃಷ್ಟಿಯಾಯಿತು. ಹಾಗಾದರೆ ಸಾಹಿತ್ಯವೆಂದರೇನು? 'ಸಹಿತಸ್ಯ ಭಾವಃ ಸಾಹಿತ್ಯಮ್'- 'ಯಾವುದು ಹಿತಭಾವವನ್ನುಂಟುಮಾಡುವುದೋ ಅದನ್ನು ಸಾಹಿತ್ಯ'ವೆನ್ನಬಹುದು. ಸಾಹಿತ್ಯದ ಅಭ್ಯಾಸದಿಂದ ಆಸುರೀ ಗುಣಗಳನ್ನು ಕಳೆದುಕೊಂಡು ದೈವೀಭಾವನೆಗಳನ್ನು ಅಳವಡಿಸಿಕೊಳ್ಳಲು ಸಾಧ್ಯವಾಗುತ್ತದೆ. ಜಗತ್ತಿನ ಸಮಸ್ತ ದೇಶಗಳ-ಸಮಸ್ತ ಕಾಲಗಳ ಪ್ರಾಜ್ಞರು ಸಾಹಿತ್ಯಕ್ಕೆ ಮೊದಲ ಆದ್ಯತೆಯನ್ನು ನೀಡಿದ್ದಾರೆ, ಸಾಹಿತಿಗಳನ್ನು ಗೌರವಿಸಿದ್ದಾರೆ. ಶ್ರೀಕೃಷ್ಣದೇವರಾಯನು ಅನ್ನಸಾನಿ ಪೆದ್ದಣ್ಣನನ್ನು ಮೆರವಣಿಗೆ ಮಾಡಿಸಿದನಲ್ಲದೆ ಸ್ವತಃ ತಾನೇ ಬರಿಗಾಲಲ್ಲಿ ನಡೆದು ಅವನ ಮೆರವಣಿಗೆಯ ಪಲ್ಲಕ್ಕಿಗೆ ಹೆಗಲುಕೊಟ್ಟನಂತೆ. ಅಂತೆಯೇ ಭೋಜರಾಜ ಕಾಳಿದಾಸನಿಗೆ ಕೊಟ್ಟಿದ್ದ ಸಮಾನತೆ-ಗೌರವ ಯಾರಿಗೆ ತಾನೇ ಗೊತ್ತಿಲ್ಲ? ಸಾಹಿತ್ಯದಿಂದ ಮಾನವ ಶ್ರೇಷ್ಠಮಾನವನಾಗುತ್ತಾನೆ. ಅದು ಸೌಂದರ್ಯ ದರ್ಶನದ ಒಂದು ಮುಖ್ಯ ದ್ವಾರವಾಗುತ್ತದೆ. ಅಂತೆಯೇ ಸಂಗೀತ ಮತ್ತು ಸಾಹಿತ್ಯ ಇವೆರಡೂ ಒಂದೇ ನಾಣ್ಯದ ಎರಡು ಮುಖಗಳು.

ಪ್ರಸ್ತುತ ಭಾರತದಲ್ಲಿ ಇಂದಿನ ನಮ್ಮ ಬಹುತೇಕ ಯುವಕರು ತಮ್ಮ ಶಿಕ್ಷಣದ ಸನ್ನಿವೇಶದಲ್ಲಿ ವೃತ್ತಿಪರ ಕೋರ್ಸ್‌ಗಳಿಗೆ ಆದ್ಯತೆಯನ್ನು ಕೊಡುತ್ತಾ ಭಾಷಾ ವಿಷಯಗಳನ್ನು ಕಣೆಗಣಿಸುತ್ತಿದ್ದಾರೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳಬೇಕೆಂದರೆ ಬಹುತೇಕ ವೃತ್ತಿಪರ ಕೋರ್ಸ್‌ಗಳಿಗೆ ದಾಖಲಾದವರು ಸಾಹಿತ್ಯ ವಿಷಯಗಳನ್ನು ಅಭ್ಯಸಿಸುವುದೇ ಇಲ್ಲ. ಇದರಿಂದಾಗುವ ಅನಾಹುತಗಳನ್ನು ಯಾರೂ ಗಮನಿಸಿದಂತಿಲ್ಲ. ಮಾನವೀಯತೆ, ಅನುಕಂಪೆ, ಭೂತ ದಯೆ, ಪರರನ್ನು ಗೌರವಿಸುವುದೇ ಆದಿಯಾಗಿ ಅನೇಕ ಸದ್ಗುಣಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳಲು ವಿಫಲರಾಗುತ್ತಾರೆ. ಇಂದಿನ ಭಯೋತ್ಪಾದಕರು ಮತ್ತು ಮಾವೋವಾದಿಗಳಲ್ಲಿ ಬಹಳ ಮಂದಿ ಉನ್ನತವಾದ ತಾಂತ್ರಿಕ ಶಿಕ್ಷಣವನ್ನು ಪಡೆದವರಾಗಿದ್ದರೂ ಮಾನವಿಕ ವಿಷಯಗಳಿಂದ ಸಾಹಿತ್ಯ ಸಂವೇದನೆಗಳಿಂದ ದೂರ ಉಳಿದ ಕಾರಣ ವಿವೇಕ ಶೂನ್ಯರಾಗಿದ್ದಾರೆ. ಇಂದಿನ ಬಹುತೇಕ ರಾಜಕಾರಣಿಗಳು ಅನ್ಯಾಯ, ಅಕ್ರಮ ಭ್ರಷ್ಟಾಚಾರಗಳಲ್ಲಿ ತೊಡಗಿಸಿಕೊಳ್ಳಲು ಕಾರಣ ಶಿಷ್ಟಾಚಾರವನ್ನು ಬೋಧಿಸುವ ಸಾಹಿತ್ಯ ಸಂಪರ್ಕವಿಲ್ಲದಿರುವುದೇ ಕಾರಣವಾಗಿದೆ. ಇತ್ತೀಚಿನ ದಿನಮಾನಗಳಲ್ಲಿ ಮಾನವೀಯ ಮೌಲ್ಯಗಳನ್ನು ಪ್ರೇರೇಪಿಸುವ, ತನ್ನೊಡ ಹುಟ್ಟಿರುವವರ ಬಗ್ಗೆ ಪ್ರೀತಿ-ವಿಶ್ವಾಸಗಳನ್ನುಂಟುಮಾಡುವ, ತನ್ನ ಸುಂದರ ಬದುಕಿಗೆ ಸಹಾಯಕವಾದ ನೂರಾರು ಅಂಶಗಳನ್ನು ಗುರ್ತಿಸುವ, ಪ್ರಕೃತಿಯ ಕೊಡುಗೆಗಳಾದ ಅರಣ್ಯಗಳು, ನದಿಗಳು, ಬೆಟ್ಟ-ಗುಡ್ಡಗಳು, ಸಾಗರ-ಸಮುದ್ರಗಳು, ಮೋಡ, ಮಳೆ, ನೆಲ-ಜಲ, ಬಿತ್ತು-ಬೆಳೆ-ಹೀಗೆ ಹತ್ತು ಹಲವು ಅಂಶಗಳಿಗೂ ತನಗೂ ಏನೇನೂ ಸಂಬಂಧ ವಿಲ್ಲದಂತೆ ಇರುತ್ತಿರುವ ಪ್ರಸಂಗಗಳನ್ನು ಕಾಣುತ್ತಿದ್ದೇವೆ. ನಮ್ಮ ಬದುಕಿಗೆ ಪೂರಕವಾದ ಅನ್ನ, ಅರಿವೆ, ಇತ್ಯಾದಿಗಳನ್ನು ಬಿತ್ತಿ ಬೆಳೆವ ಗ್ರಾಮೀಣ ಬಂಧುಗಳ, ಪಶು-ಪಕ್ಷಿಗಳು ಪ್ರಾಣಿ ವೈವಿಧ್ಯ ಹೀಗೆ ಅದೆಷ್ಟೊಂದು ಅಂಶಗಳಿಗೆ ಋಣಿಗಳಾಗಿದ್ದೇವೆ! ಆ ಋಣಭಾರವನ್ನು ತೀರಿಸಲೇಬೇಕಾದ ಎಚ್ಚರಿಕೆಯನ್ನು ನೀಡುವ ನಮ್ಮ ಕಥೆ-ಕಾವ್ಯಗಳು, ಕವನಗಳು -ನಾಟಕಗಳು, ಹೀಗೆ ವಿವಿಧ ಪ್ರಕಾರದ ಸಾಹಿತ್ಯಗಳನ್ನು ಸ್ಥೂಲವಾಗಿ ಯಾದರೂ ಪರಿಚಯ ಹೊಂದದೆ ಹೋದಲ್ಲಿ ಬದುಕಿನಲ್ಲಿ ಉಂಟಾಗುವ ಅನಾಹುತಗಳಿಗೆ ಲೆಕ್ಕವಿರುವುದಿಲ್ಲ.

ಇಂದಿನ ಯುವಪೀಳಿಗೆ ತಾಂತ್ರಿಕ ಹಾಗೂ ಔದ್ಯೋಗಿಕ ಶಿಕ್ಷಣಕ್ಕೆ ಮಾತ್ರವೇ ಗಮನಕೊಟ್ಟು ಮಾನವಿಕ ಹಾಗೂ ಸಾಹಿತ್ಯಕ ವಿಷಯಗಳನ್ನು ಉದಾಸೀನಮಾಡುತ್ತಿರುವುದು ಅವನತಿಯ ಸಂಕೇತ. ಕುವೆಂಪುರವರು ಹೇಳುವಂತೆ 'ದೇಶ ನನ್ನದು ನನ್ನದು ನಾಡು ಎನ್ನದ ಮಾನವನೆದೆ ಸುಡುಗಾಡು, ದೂರದೇಶದಿ ಹೋದಾ ತೀರದಿ ತನ್ನ ನಾಡನು ನೆನೆನೆನೆದುಬ್ಬದ ಮಾನವನಿದ್ದರೆ ಲೋಕದಲಿ ತಾವಿಲ್ಲನವನಿಗೆ ನಾಕದಲಿ, ವೀರಲೋಕದಲಿ' ಎನ್ನುವ ಅಂಶವನ್ನು ಗಮನಿಸಿದಾಗ ಅದೆಷ್ಟೋ ಮಂದಿ ಉನ್ನತ ಹುದ್ದೆಯನ್ನ ಲಂಕರಿಸಿದವರು ಇಂದು ದೇಶದ್ರೋಹ ಕಾರ್ಯದಲ್ಲಿ ತೊಡಗಿರುವುದನ್ನು ಗಮನಿಸಿದರೆ ಎದೆಬಿರಿಯುತ್ತದೆ. ರಾಷ್ಟ್ರಕವಿ ಕುವೆಂಪುರವರು ಬೇರೊಂದು ಪ್ರಸಂಗದಲ್ಲಿ ಹೀಗೆ ಉದ್ಗರಿಸುತ್ತಾ 'ಹೆರರ ಗೋಳನು ಕಂಡು ಎದೆಬೆಂದು, ಬಟ್ಟೆಗೆಟ್ಟೊಬ್ಬನನು ಕೈಹಿಡಿದು ಜೀವನದ ಕರಿಮಣಿಯ ಕತ್ತಲಲಿ ಭರವಸೆಯನ್ನು ನೀಡಬಲ್ಲ ವಿದ್ಯಾವಂತ ತರುಣರ ಅವಶ್ಯಕತೆ ನಮಗೆ ಇಂದು ಅತ್ಯವಶ್ಯಕವಾಗಿದೆ. ವಿಶ್ವಕವಿ ಗುರುದೇವ ರವೀಂದ್ರನಾಥರ ನೊಬೆಲ್ ವಿಜೇತ ಗೀತಾಂಜಲಿಯನ್ನು ಅದೆಷ್ಟು ನಮ್ಮ ಇಂದಿನ ತರುಣ ವಿದ್ಯಾವಂತರು ಅಧ್ಯಯನ ಮಾಡಿದ್ದಾರೆ? 'ಎಲ್ಲಿ ರೈತ ತನ್ನ ಹೊಲದಿ ದುಡಿಯುತಿರುವನೊ, ಎಲ್ಲಿ ಕೆಲಸಗಾರ ದಾರಿಯನ್ನು ಕೊರೆವನೋ ಅಲ್ಲಿ ಇರುವನಯ್ಯ ದೇವ ಕೆಸರು ಧೂಳಲಿ' ಎಂಬ ಸಾಲುಗಳ ಪರಿಚಯವಾದರೂ ಬೇಡವೇ? ಇದನ್ನೇ ಅಲ್ಲವೆ ಶರಣರು ಕಾಯಕವೇ ಕೈಲಾಸ ಎಂದದ್ದು. ಕರ್ನಾಟಕದ ರೂವಾರಿಗಳೂ, ಮಾಜಿ ಮುಖ್ಯಮಂತ್ರಿಗಳೂ ಆದ ಶ್ರೀ ಎಸ್. ನಿಜಲಿಂಗಪ್ಪ, ಮಾಜಿ ಮಂತ್ರಿಗಳಾದ ಶ್ರೀ ಗೋವಿಂದಗೌಡರೇ ಮುಂತಾಗಿ ನಮ್ಮ ಕೆಲವು ಮಂತ್ರಿ ಮಹೋದಯರು, ವಿಶ್ವೇಶ್ವರಯ್ಯ, ಬಾಳೆಕುಂದ್ರಿಯವರಂಥ ಹ ಶ್ರೇಷ್ಠ ಇಂಜಿನಿಯರುಗಳು ಸ್ವಾರ್ಥ ರಹಿತರಾಗಿ ಉತ್ತಮ ಕೆಲಸ ಮಾಡಿದ್ದರೆ ಅದು ಅವರಿಗೆ ದೊರೆತ ಸಂಸ್ಕಾರಯುಕ್ತ ವಿದ್ಯೆಯ ಫಲ. ಇತ್ತೀಚಿನ ದಿನಗಳಲ್ಲಿ ಅಕ್ಷರಸ್ಥರ ಸಂಖ್ಯೆ ಹೆಚ್ಚಾದಂತೆ ಅಪರಾಧಿಗಳ ಸಂಖ್ಯೆಯೂ ಹೆಚ್ಚಾಗುತ್ತಿದೆ. ಇದಕ್ಕೆ ಮೂಲ ಕಾರಣ ಮಾನವನನಲ್ಲಿ ಸದ್ಗುಣಗಳನ್ನು ಆವಿರ್ಭವಿಸುವ ಸೂಕ್ತ ಸಾಹಿತ್ಯ ವಿಚಾರಗಳಿಂದ ವಂಚಿತರಾಗಿರುವುದೇ ಕಾರಣವಾಗಿದೆ. ಇಂದಿನ ವಿಜ್ಞಾನ ಶಿಕ್ಷಕರನೇಕರಲ್ಲಿ ಮೌಢ್ಯಾಂಧಕಾರ ತುಂಬಿರುವುದನ್ನು ಯಾರು ಬೇಕಾದರೂ ಗಮನಿಸಬಹುದಾಗಿದೆ.

ಸುದೈವದಿಂದ ನಮ್ಮಲ್ಲಿ ಹಲವಾರು ಸುಧಾರಕರು, ಚಿಂತಕರು ಸೂಕ್ತ ಮಾರ್ಗದರ್ಶನಗಳನ್ನು ನೀಡಿ ಹೋಗಿದ್ದಾರೆ. ಅವರು ತೋರಿದ ದಾರಿಯಲ್ಲಿ ನಾವಿಂದು ನಡೆಯಬೇಕಾಗಿದೆ. ಅಂತಃಸಾಕ್ಷಿಯನ್ನು ಪ್ರಶ್ನಿಸುವಂತಹ ಸಾಹಿತ್ಯದ ಅವಶ್ಯಕತೆ ಎಂದಿಗಿಂತ ಇಂದು ಅತ್ಯವಶ್ಯಕವಾಗಿದೆ. ವ್ಯಕ್ತಿತ್ವ ನಿರ್ಮಾಣ ಮಾಡುವಂತಹ ಸಾಹಿತ್ಯದ ಪರಿಚಯ ಪ್ರತಿಯೊಬ್ಬರಿಗೂ ಅವಶ್ಯವಿದೆ. ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರು ಹೇಳುವಂತೆ 'ಕಟ್ಟ ಇಟ್ಟಿಗೆಯಿಂದ ಕಟ್ಟದಿರು ಹೊಸ ಮನೆಯ 'ಕಣ್ಣೆತ್ತಿಯೂ ನೋಡದಿರು ದೊಡ್ಡವರ ಸಣ್ಣತನದತ್ತ, ಬಿಟ್ಟು ಬಿಡು ಅವರನ್ನು ಅತ್ತಕಡೆಗೆ' ಹೌದು ಆ ದೊಡ್ಡವರನ್ನೇನೋ ಬಿಟ್ಟುಬಿಡೋಣ ಆದರೆ ಇಂದಿನ ಯುವಕರಿಗೆ ಸೂಕ್ತ ಮಾರ್ಗದರ್ಶನ ಮಾಡುವವರು ಯಾರು? ಅದಕ್ಕಾಗಿ ಕೆಲವು ಪರಿಹಾರ ರೂಪಕ ಉತ್ತರಗಳನ್ನು ಕಂಡುಕೊಳ್ಳಬಹುದು.

೧) ಎಲ್ಲಾ ಸ್ತರದ ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣ ಸಂಸ್ಥೆಗಳಲ್ಲಿ ಕಡ್ಡಾಯವಾಗಿ ನೈತಿಕತೆಯನ್ನು ಬೋಧಿಸುವಂತಹ ಗದ್ಯ-ಪದ್ಯ ನೀತಿಕಥೆ, ಕವನ ನಾಟಕಗಳನ್ನೊಳಗೊಂಡ ಪಠ್ಯವನ್ನು ಒಂದು ವಿಷಯವಾಗಿ ಪರೀಕ್ಷೆಗೆ ನಿಗದಿಗೊಳಿಸಬೇಕು.

೨) ನಮ್ಮ ಇತಿಹಾಸ ಪರಂಪರೆ ರಾಷ್ಟ್ರಕ್ಕಾಗಿ ತ್ಯಾಗಮಾಡಿದ ವೀರರ ವಿಚಾರಗಳನ್ನು ಕಡ್ಡಾಯವಾಗಿ ಎಲ್ಲರೂ ಅಧ್ಯಯನ ಮಾಡುವಂತಹ ವ್ಯವಸ್ಥೆಯಾಗಬೇಕು.

೩) ಶಾಲಾ-ಕಾಲೇಜುಗಳಲ್ಲಿ (ವೃತ್ತಿಪರವೂ ಸೇರಿದಂತೆ) ಪ್ರತಿವಾರ ಕನಿಷ್ಠ ಒಂದು ಗಂಟೆಯ ಅವಧಿಯಲ್ಲಿ ಚರ್ಚಾ ಸ್ಪರ್ಧೆ, ಭಾಷಣ, ಕಾವ್ಯ, ವಾಚನ, ಕಥೆ, ಪ್ರಬಂಧ ಸ್ಪರ್ಧೆ ಮೊದಲಾದ ಸಾಹಿತ್ಯ ಚಟುವಟಿಕೆಗಳನ್ನು ಕಡ್ಡಾಯವಾಗಿ ಏರ್ಪಡಿಸುವುದು. ದೇಶವನ್ನಾಳುತ್ತಿರುವ ಕೆನೆಪದರದ ವಿದ್ಯಾವಂತರುಗಳು ಇತ್ತಕಡೆ ಗಮನಹರಿಸಬೇಕಾದುದು ಪ್ರಸ್ತುತ ಆದ್ಯ ಕರ್ತವ್ಯವಾಗಿದೆ. ❑

* 8ನೇ ಅಡ್ಡರಸ್ತೆ, 1ನೇ ಮೈನ್, ಶ್ರೀನಗರ, ದೇವರಾಯಪಟ್ಟಣ ಅಂಚೆ, ತುಮಕೂರು-572 104.

## ಸ್ಮರಣೆ

# ಕಿನ್ನರಿ ಬೊಮ್ಮಯ್ಯ

-ಯು.ಎನ್. ಸಂಗನಾಳಮಠ *

ಕಿನ್ನರಿ ಬೊಮ್ಮಣ್ಣ, ಕಿನ್ನರಿ ಬ್ರಹ್ಮಯ್ಯ, ಕಿನ್ನರಿ ಬೊಮ್ಮಯ್ಯ ಎಂದು ಕರೆಯುವ ಈತ ಮೂಲತಃ ಆಂಧ್ರದ ಗುಡೂರು ಗ್ರಾಮದವನು. ವೃತ್ತಿಯಿಂದ ಅಕ್ಕಸಾಲಿಗ. ಒಮ್ಮೆ ಗುರುವಿಗೆ ಆಭರಣ ಮಾಡುವ ಸಂದರ್ಭದಲ್ಲಿ ತೂಕ ಕಡಿಮೆಯಾಗಲು ಬೇಸರ ಹೊಂದಿ ವೃತ್ತಿಯನ್ನೇ ತ್ಯಜಿಸಿ, ಕಲ್ಯಾಣದತ್ತ ಹೊರಟು, ಅಲ್ಲಿಯ ತ್ರಿಪುರಾಂತಕೇಶ್ವರಿ ದೇವಾಲಯದಲ್ಲಿ ಕಿನ್ನರಿ ಬಾರಿಸುವ ಕಾಯಕವನ್ನು ಕೈಕೊಂಡನು. ಅದರಿಂದ ಬಂದ ಆದಾಯದಿಂದ ಜಂಗಮ ದಾಸೋಹ ನಡೆಸುತ್ತಿದ್ದನು. ಇದರಿಂದ ಕಿನ್ನರಿ ಬ್ರಹ್ಮಯ್ಯ ನೆಂಬ ಹೆಸರು ಬಂದಿತು. ಶಿವಾನುಭಾವಿಯಾಗಿ ಬಸವಾದಿ ಶರಣರ ಮೆಚ್ಚುಗೆಗೆ ಪಾತ್ರನಾದನು. ಈತನ ಅಂಕಿತನಾಮ 'ಮಹಾಲಿಂಗ ತ್ರಿಪುರಾಂತಕದೇವ'.

ಒಂದು ಸಲ ಕಿನ್ನರಯ್ಯನಿಗೆ ಬಸವಣ್ಣನವರು ತಮ್ಮ ಮಹಾಮನೆಯ ಪ್ರಸಾದಕ್ಕೆ ಆಮಂತ್ರಣವಿತ್ತರು. ಎಲ್ಲರೂ ಪ್ರಸಾದ ತೆಗೆದುಕೊಳ್ಳಲು ಕುಳಿತುಕೊಂಡರು. ಭೋಜನದಲ್ಲಿ ಈರುಳ್ಳಿ ಇದ್ದಿಲ್ಲ. ಅದಕ್ಕೆ ಈರುಳ್ಳಿಯನ್ನು ಕೇಳಿದರು. ಆಗ ಬಸವಣ್ಣನವರು ಬಂದರು. ಈರುಳ್ಳಿ ಬೇಕಾ ಅಸಹ್ಯ! ಎಂದರು. ತಕ್ಷಣ ಕಿನ್ನರಯ್ಯ ಎದ್ದು ಹೊರಟ. ಬಸವಣ್ಣನವರಿಗೆ ಗಾಬರಿಯಾಯಿತು. ಈರುಳ್ಳಿಯ ಬಗ್ಗೆ ತಮ್ಮಲ್ಲಿ ಇನ್ನೂ ಪೂರ್ವಾಶ್ರಮದ ವಾಸನೆ ಇರುವುದರ ಬಗ್ಗೆ ಆತಂಕ ಹೊಂದಿದರು. ಇದನ್ನು ತಮಗೆ ತಿಳಿಸಲೆಂದೇ ಕಿನ್ನರಯ್ಯ ಈ ರೀತಿ ವರ್ತಿಸಿದ್ದಾನೆ ಎಂದು ತಮ್ಮ ತಪ್ಪನ್ನು ತಿಳಿದುಕೊಂಡರು. ಮರಳಿ ಬನ್ನಿ ಎಂದು ಕರೆದರೂ ಬರಲಿಲ್ಲ. ಮರುದಿನ ಬಸವಣ್ಣನವರು ಈರುಳ್ಳಿ ತುಂಬಿದ ಚಕ್ಕಡಿ ಸಮೇತ ಕಿನ್ನರಯ್ಯನನ್ನು ಮನೆಗೆ ಕರೆತಂದು ಪ್ರಸಾದಕ್ಕೆ ಅಣಿ ಮಾಡಿದರು. ಯಾವ ಅಲ್ಪ ದೋಷವನ್ನು ಬಸವಣ್ಣ ಸಹಿಸರು. ಅದಕ್ಕೆ ಬಸವಣ್ಣ ಎಂದರೆ ಏನೂ ಊನವಿಲ್ಲದವರು.

ಕಲ್ಯಾಣಕ್ಕೆ ಬಂದ ಅಕ್ಕಮಹಾದೇವಿಯ ತೀವ್ರತರವಾದ ವೈರಾಗ್ಯವನ್ನು ಒರೆಹಚ್ಚಿ ನೋಡಿದವರಲ್ಲಿ ಕಿನ್ನರಯ್ಯ ಮೊದಲಿಗ. ಅಕ್ಕನ ನಿಜವಾದ ಭಕ್ತಿವೈರಾಗ್ಯ ಕಂಡು ಪಶ್ಚಾತ್ತಾಪ ಹೊಂದಿ 'ಹುಲಿನೆಕ್ಕಿ ಬದುಕಿದೆನು ಶರಣಾರ್ಥಿ ಶರಣಾರ್ಥಿ ತಾಯೆ' ಎಂದನು. ಹುಲಿ ಕಾಡು ಪ್ರಾಣಿ. ಅದು ನೆಕ್ಕಿದ ಮೇಲೆ ಯಾವ ಪ್ರಾಣಿಗೂ ಉಳಿಗಾಲವಿಲ್ಲ. ಹಾಗೆ ಕಾಮ ಎಂಬುದು ಹುಲಿ ಇದ್ದಂತೆ ಅದು ಆವರಿಸಿದರೆ ಮನುಷ್ಯ ಇದ್ದೂ ಇಲ್ಲದಂತೆ ಆದ್ದರಿಂದ ಕಿನ್ನರಯ್ಯ ನಿನ್ನಿಂದ ಆ ಹುಲಿಯೆಂಬ ಕಾಮವನ್ನು ಗೆದ್ದೆನು ಎಂದು ಹೇಳಿದ್ದಾನೆ. ಈಗಾಗಲೇ ಅಕ್ಕನವರು ಹುಲಿಯಿಂದ ಪಾರಾಗಿದ್ದಾರೆ.

ಕಿನ್ನರಯ್ಯ ಮಹಾದಯಾಮಯಿ. ಒಂದು ಮುಂಜಾನೆ ಒಂದು ಹೋತ ತ್ರಿಪುರಾಂತಕೇಶ್ವರ ದೇವಾಲಯದ ಹಿಂದೆ ಅವಿತುಕೊಂಡಿತು. ಅಷ್ಟರಲ್ಲಿ ಕೈಯಲ್ಲಿ ಮಚ್ಚು ಹಿಡಿದಿದ್ದ ಹಂತಕನು ಬಂದು ಅದನ್ನು ದರದರನೆ ಎಳೆಯತೊಡಗಿದ. ಆಗ ಕಿನ್ನರಯ್ಯ ರಕ್ಷಣೆಗೆ ಧಾವಿಸಿ, ಬಿಡಲು ವಿನಂತಿಸಿದ. ಮತ್ತು ಕುರಿಯ ಕಿಮ್ಮತ್ತು ಕೊಡುವೆನು ಎಂದಾಗ ತಿರುಕ ಜಂಗಮ ನೀನು ಮುರುಕು ಕಿನ್ನರಿ ನಿನಗೆ! ಎಂದು ಹಾಸ್ಯ ವಾಡಿದ. ಆಗ ಕಿನ್ನರಿ ಬಾರಿಸಿ ಚಿನ್ನ ಸುರುವಿದರು. ಆಗ ಹಂತಕ ಚಿನ್ನ ತೆಗೆದುಕೊಂಡು ತನ್ನ ಪ್ರೇಯಸಿಗೆ ಕೊಡಲು ಹೋದಾಗ ಅವನ ಪ್ರೇಯಸಿ ಚಿನ್ನ ಬೇಡ ತನಗೆ ಆ ಹರಕೆ ಕುರಿ ಬೇಕು ಎಂದು ಹಠ ಹಿಡಿದಳು. ಆ ಹಂತಕ ಹರಕೆ ಕುರಿ ಎಳೆದೊಯ್ಯುತ್ತಿರುವಾಗ ಕಿನ್ನರಯ್ಯನಿಗೂ ಅವನಿಗೂ ಕಾಳಗ ನಡೆದು ಅದರಲ್ಲಿ ಅವನು ಹತನಾದ. ರಾಜನ ಹತ್ತಿರ ವಿಚಾರ ಹೋಯಿತು. ಇದಕ್ಕೆ ಸಾಕ್ಷಿ ಕೇಳಿದಾಗ ತ್ರಿಪುರಾಂತಕೇಶ್ವರ ಎಂದ ಕಿನ್ನರಯ್ಯ ದೇವರು ಸಾಕ್ಷಿ ನುಡಿಯಿತು. ಕಿನ್ನರಯ್ಯ ನಿರ್ದೋಷಿ ಆದನು. ಇಷ್ಟೇ ಪ್ರಾಣಿ ಬಲಿ ನಿಷೇಧವನ್ನು ಶರಣರು ಅಂದೇ ಜಾರಿಗೆ ತಂದಿದ್ದರು.

ಹೀಗೆ ಕಿನ್ನರಿ ಬೊಮ್ಮಯ್ಯ ಸಂಗೀತಕಾರನೂ, ಪ್ರಾಣಿ ದಯಪರನೂ, ಅಂತಃಕರುಣಿಯೂ ಆಗಿದ್ದನು.

ಬಸವಣ್ಣ ಒಂದು ವಚನದಲ್ಲಿ ತನ್ನ ಶರಣ ಸಂತಾನವನ್ನು ಪರಿಚಯಿಸುತ್ತಾ 'ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ' ಎನ್ನುತ್ತಾರೆ. ಕೂಡಲಸಂಗಮದೇವನ ಅನಂತ ಕರುಣೆಗೆ ತಮ್ಮನ್ನು ಒಪ್ಪಿಸಿಕೊಳ್ಳುತ್ತಿರುವ ಭಕ್ತಿ ಸಮರ್ಪಣೆಯಲ್ಲಿ **'ಎನ್ನ ತಪ್ಪು ಅನಂತಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ. ಇನ್ನು ತಪ್ಪಿದೆನಾದಡೆ ನಿಮ್ಮ ಪಾದವೇ ದಿಬ್ಯ ಕೂಡಲಸಂಗಮದೇವಯ್ಯ, ನಿಮ್ಮ ಪ್ರಮಥರ ಮುಂದೆ ಕಿನ್ನರ ಬೊಮ್ಮಣ್ಣ ಸಾಕ್ಷಿ'** ಎಂದು ಸಂಕಲ್ಪಿಸುತ್ತಾರೆ. □

* ಉಪನ್ಯಾಸಕರು, ಪದವಿಪೂರ್ವ ಕಾಲೇಜು, ಹೊನ್ನಾಳಿ, ದಾವಣಗೆರೆ ಜಿಲ್ಲೆ.



## ವಿಚಾರ

# ಹಸಿವೆಂಬ ಹೆಬ್ಬಾವು

-ರಮೇಶಬಾಬು ಯಾಳಗಿ ಸಗರ *

ಪ್ರಜಾಪ್ರಭುತ್ವ ಎಂಬುದು ಒಂದು ಪದ್ಧತಿಯ ಸರಕಾರವಲ್ಲ; ಅದೊಂದು ಜೀವನ ವಿಧಾನ. ರಾಜಕೀಯ, ಸಾಮಾಜಿಕ ಪ್ರಜಾಪ್ರಭುತ್ವದ ಜೊತೆಗೆ ಆರ್ಥಿಕ ಪ್ರಜಾಪ್ರಭುತ್ವ ಅವಶ್ಯಕ. ಇದು ಇರದಿದ್ದರೆ ಉಳ್ಳವರು, ಇಲ್ಲದವರು, ಶ್ರೀಮಂತರು, ಬಡವರು ಎಂಬ ತಾರತಮ್ಯ ತಲೆದೋರುತ್ತದೆ. ಪ್ರತಿಯೊಬ್ಬರಿಗೂ ಮೂಲಭೂತ ಅವಶ್ಯಕತೆಗಳನ್ನು ಒದಗಿಸುವುದು ಪ್ರಜಾಸತ್ತೆಯ ಪ್ರಮುಖ ಕಾರ್ಯ. ದುರಂತದ ವಿಷಯವೇನೆಂದರೆ? ಸಂವಿಧಾನದಲ್ಲಿರುವ ಮೂಲಭೂತ ಹಕ್ಕುಗಳಿಗೂ ಜನ ಅನುಭವಿಸುತ್ತಿರುವುದಕ್ಕೂ ಬಹಳ ಅಂತರವಿದೆ. ಏಕೆಂದರೆ ೨೧ನೇ ಶತಮಾನದಲ್ಲೂ ಸರ್ವೇಜನಾ ಸುಖಿನೋ ಭವಂತು. ಸರ್ವರಿಗೆ ಸಮಪಾಲು, ಸಮಬಾಳು, ಸರ್ವೋದಯದ ತತ್ವಗಳು, ಗಾಂಧೀವಿಚಾರಗಳು, ಉದಾರವಾದಿ ಚಿಂತನೆಗಳು ಸಮರ್ಪಕವಾಗಿ, ಸಾರ್ವತ್ರಿಕವಾಗಿ ಸರ್ವಜನರಿಗೆ ಲಭಿಸದೇ ಇರುವುದು ವಿಪರ್ಯಾಸವೇ ಸರಿ, ಭಾರತದ ಬಹುಸಂಖ್ಯೆಯ ಬಡವರು ಇನ್ನು ತುತ್ತು ಅನ್ನಕ್ಕಾಗಿ ಪರದಾಡುವ ಶೋಚನೀಯ ಸ್ಥಿತಿ ಪ್ರಸ್ತುತ ದಿನಮಾನಗಳಲ್ಲಿಯೂ ಮುಂದುವರಿದಿರುವುದು ಪ್ರಜಾಪ್ರಭುತ್ವಕ್ಕೆ ಒಡ್ಡಿದ ಒಂದು ದೊಡ್ಡ ಸವಾಲೇ ಸರಿ.

ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಆಹಾರ ಅತ್ಯಂತ ಪ್ರಮುಖವಾದುದು. ಹೊಟ್ಟೆಯನ್ನು ತುಂಬಿಸಿಕೊಳ್ಳಲು ಏನೆಲ್ಲ ಹರಸಾಹಸ ಮಾಡಬೇಕಾಗುತ್ತದೆ. ಅಂತೆಯೇ **'ಉದರ ಪೋಷಣಂ ಬಹುಕೃತವೇಷಂ'** ಎಂದು ಹೇಳಲಾಗುತ್ತಿದೆ. 'ಹಸಿವೆಯಾದವನಿಗೆ ಆಧ್ಯಾತ್ಮ ರುಚಿಸುವುದಿಲ್ಲ' ಹಸಿದವರ ಮುಂದೆ ಸುಂದರವಾದ ವಸ್ತು ಸುಳಿದಾಡಿದರೂ ಮನಸ್ಸು ಚಂಚಲವಾಗದು. ಹಸಿದವರೆಲ್ಲರಿಗೂ ಅನ್ನದ ಮೇಲೆ ಮನಸ್ಸು ಇರುತ್ತದೆ ವಿನಃ ಇನ್ನೊಂದರ ಮೇಲೆ ಮನಸ್ಸು ಹರಿಯದು.

ಯಾರಿಗೆ ಒಡಲು ಇದೆಯೋ ಅವರೆಲ್ಲರಿಗೂ ಹಸಿವು ಆಗುವುದು ಸಹಜ. ಕೆಲವರು ಅತಿ ಸುಲಭವಾಗಿ ಹೊಟ್ಟೆ ತುಂಬಿಸಿಕೊಂಡು ಮುಂದಿನ ದಿನಕ್ಕಾಗಿ ಸಂಗ್ರಹಿಸಿ ಇಡುತ್ತಾರೆ. ಇನ್ನು ಕೆಲವರು ನಾಳೆಗಾಗಿ ಕೂಡಿಡುವುದು ದೂರದ ಮಾತು. ಬೆವರು ಸುರಿಸಿ ದುಡಿದರು ಇಂದಿನ ಗಗನಕ್ಕೇರಿದೆ ಬೆಲೆಗಳಲ್ಲಿ ತುತ್ತು ಅನ್ನಕ್ಕಾಗಿ ಪರದಾಡುತ್ತಲೆ ಇರುತ್ತಾರೆ. ಇದನ್ನು ಅರಿತೇ ಆದ್ಯ ವಚನಕಾರ ದೇವರ ದಾಸಿಮಯ್ಯ

***ಒಡಲುಗೊಂಡವ ಹಸಿವ***  
***ಒಡಲುಗೊಂಡವ ಹುಸಿವ***  
***ಒಡಲುಗೊಂಡವನೆಂದು ನೀನೆನ್ನ***  
***ಜಡಿದೊಮ್ಮೆ ನುಡಿಯದಿರಾ ನೀ ನನ್ನಂತೆ***  
***ಒಮ್ಮೆ ಒಡಲುಗೊಂಡ ನೋಡಾ ರಾಮನಾಥ***

ಹಸಿದವರ ಪರವಾಗಿ ಧ್ವನಿ ಎತ್ತಿದ ಸಮಾಜ ಚಿಂತಕ ದಾಸಿಮಯ್ಯನವರು. ಹೊಟ್ಟೆ ಇದ್ದವನಿಗೆ ಹಸಿವು ಆಗುವುದು ಸಹಜ, ಹಸಿವೆಯಾದಾಗ ತುತ್ತು ಅನ್ನಕ್ಕಾಗಿ ಹುಸಿ ನುಡಿದರು ನುಡಿಯಬಹುದು ಇದರಲ್ಲಿ ಸಂಶಯವೇ ಬೇಡ. ನೀನು ಹಸಿದವರಂತೆ ಒಮ್ಮೆಯಾದರೂ ಹಸಿದುನೋಡು ಹಸಿದ ಒಡಲಿನ ಪಡಿಪಾಟ ಎಂತದ್ದು ಎಂದು ಅರಿಯಲು ಎಂಬ ಪ್ರಶ್ನೆ ಹೊಟ್ಟೆ ತುಂಬಿದವರಿಗೆ ಕೇಳುತ್ತಾನೆ. ದೇವರಿಗೆ ಪ್ರಶ್ನಿಸುತ್ತಾನೆ.

ದೇವರು ನಮ್ಮನ್ನು ಏನು ಕೇಳುವುದಿಲ್ಲ ಆದರೂ ನೈವೇದ್ಯ ಅರ್ಪಿಸುತ್ತೇವೆ. ಆತನಿಗೆ ಬೆಳಕೇ ಬೇಕಾಗಿಲ್ಲ (ಏಕೆಂದರೆ ಜಗತ್ತಿಗೆ ಬೆಳಕು ನೀಡುವವನು) ಆದರೂ ಎಣ್ಣೆಯ, ತುಪ್ಪದ ದೀಪ ಹಚ್ಚುತ್ತೇವೆ. ಹಸಿದವನು ಮನೆಯ ಬಾಗಿಲಿಗೆ ಬಂದರೂ ನೋಡಿದರೂ ನೋಡದಂತೆ ಕದ ಹಾಕಿಕೊಳ್ಳುತ್ತೇವೆ. ಇದೆಂತಹ ವಿಪರ್ಯಾಸ, ಆದರೂ ಇದು ಕಟುಸತ್ಯ.

ನಮ್ಮ ಭಾರತದಲ್ಲಿ ಕೆಲವರಿಗೆ ಹೊಟ್ಟೆ ಕರಗಿಸಿಕೊಳ್ಳುವ ಚಿಂತೆ; ಇನ್ನು ಹಲವರಿಗೆ ಹೊಟ್ಟೆ ತುಂಬಿಸಿಕೊಳ್ಳುವ ತವಕ. ಶ್ರೀಮಂತ ಬಡವ ಮಧ್ಯೆ ಅಂತರವಿರುವುದು ಇಲ್ಲಿಯೆ! ಶ್ರೀಮಂತಿಕೆಯು ಯಜಮಾನನಂತೆ, ಬಡತನವು ಸೇವಕನಂತೆ ಕೆಲಸ ಮಾಡುತ್ತಿದೆ. ಇದರಿಂದ ಸಾಮಾಜಿಕ ನ್ಯಾಯ, ಸಾಮಾಜಿಕ ಸಮಾನತೆ ಎಂಬುದು ಇಂದು ಹಗಲು ಗನಸಾಗಿದೆ.

ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಸಾರ್ವಜನಿಕರು ಸಕ್ರಿಯವಾಗಿ ಪಾಲ್ಗೊಂಡು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಬೇಕು, ಆದರೆ ಓಟು ಕೊಡುವವನಿಗೆ ಊಟ

* ಉಪನ್ಯಾಸಕರು, ಶ್ರೀ ಸಂಗಮೇಶ್ವರ ವೀರಮಾಂಬೆ ಕಲ್ಮಠ ಡಿ.ಇಡಿ. ಕಾಲೇಜು, ಮಾನವಿ-584 123. ರಾಯಚೂರು ಜಿಲ್ಲೆ.

ವಿರದಿದ್ದರೇ ಆ ಹಸಿದ ಹೊಟ್ಟೆಗಳು ರಾಜಕೀಯ ವ್ಯವಸ್ಥೆಯ ಬಗ್ಗೆ ಗೌರವ ಭಾವ ತಾಳದೇ ನಿರುತ್ಸಾಹದಿಂದ ಅದೊಂದು ಹೊಲಸಿನ ಆಟವೆಂದು ಜರಿದು ಸುಮ್ಮನಾಗಿ ಬಿಡುತ್ತಾರೆ, ಹೊಟ್ಟೆ ತುಂಬಿದ್ದರೆ ಮಾತ್ರ ಅಭಿಪ್ರಾಯ ವ್ಯಕ್ತಪಡಿಸಬಲ್ಲ, ಉಪದೇಶ ಮಾಡಬಲ್ಲ, ಭಾಷಣ ಬಿಗಿಯ ಬಲ್ಲ, ವಿಚಾರ ಮಂಥನ ನಡೆಸಬಲ್ಲ ಹೊಟ್ಟೆ ತಾಳ ಹಾಕುವಾಗ ಬುದ್ಧಿ ಕೆಲಸ ಮಾಡಿತಾದರು ಹೇಗೆ? 'ನಿಜವಾಗಿಯೂ ತಲೆ ಹೊಟ್ಟೆಯನ್ನು ಆಳುವುದಿಲ್ಲ; ಹೊಟ್ಟೆಯೇ ತಲೆಯನ್ನು ಆಳುತ್ತದೆ' ಎಂಬ ವಿಚಾರ ಎಷ್ಟು ಅರ್ಥವತ್ತಾಗಿದೆ ಅಲ್ಲವೆ?

*ಹಸಿವೆಂಬ ಹೆಬ್ಬಾವು ಬಸಿರ ತಾ ಹಿಡಿದೊಡೆ*
*ವಿಷವೇರಿತ್ತಯ್ಯ ಅಪಾದಮಸ್ತಕಕ್ಕೆ*
*ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಡೆ*
*ವಸುಧೆಯೊಳಗೆ ಆತನೆ ಗಾರುಡಿಗ ಕಾಣಾ ರಾಮನಾಥ*

ನೇಕಾರಿಕೆ ವೃತ್ತಿಯನ್ನು ಮಾಡುತ್ತಿರುವ ದಾಸಿಮಯ್ಯನಿಗೆ 'ಹಸಿವಿನ ಪರಿಚಯ' ಅಪರಿಚಿತವೇನಲ್ಲ, ತಾನು ಅನುಭವಿಸಿದ ಮತ್ತು ತನ್ನ ಕಾಲದಲ್ಲಿ ಇದ್ದ ಅಸಮಾನತೆಯ ವಿರುದ್ಧ ಒಂದು ದೊಡ್ಡ ಬಂಡಾಯದ ಧ್ವನಿ ಎತ್ತಿದವನು ದಾಸಿಮಯ್ಯನವರು. ಹಸಿವೆನ್ನುವ ಹೆಬ್ಬಾವು ಹೊಟ್ಟೆ ಹಿಡಿದಾಗ ಆ ವಿಷ ತಲೆಗೆ ಏರುತ್ತದೆ. ಇಂತಹ ಹಸಿವೆಂಬ ವಿಷವೇರಿದವನಿಗೆ ಅನ್ನವ ನೀಡಿ ವಿಷವನ್ನು ಕಳೆಯುವ ಮಾನವೀಯತೆಯ ಮನುಷ್ಯನೇ ಈ ವಸುಧೆಯೊಳಗೆ ದೇವರು ಎನಿಸಿಕೊಳ್ಳುತ್ತಾನೆ. ಇಂತಹ ದೇವರುಗಳ ಅವಶ್ಯಕತೆ ಇಂದಿನ ದಿನಮಾನಗಳಲ್ಲಿ ತೀರ ಅವಶ್ಯಕವಾಗಿದೆ.

ಹಸಿದವರ ಬಗ್ಗೆ ಅನುಕಂಪ ಬೇಡ. ಅವಕಾಶ ನೀಡಿ. ಅವಶ್ಯಕತೆ ಪೂರೈಸಲು ಪ್ರಯತ್ನಿಸಿರಿ, ಇತ್ತೀಚಿನ ದಿನಮಾನಗಳಲ್ಲಿ ನೈತಿಕ ಮೌಲ್ಯಗಳು ನೆಲಕಚ್ಚಿವೆ, ಮಾನವೀಯತೆ ಮಾಯವಾಗಿದೆ. ಹಸಿದ ಹೊಟ್ಟೆಯ ಬಗ್ಗೆ ತುಂಬಿದ ಹೊಟ್ಟೆ ತಲೆ ಕೆಡಿಸಿಕೊಳ್ಳುತ್ತಿಲ್ಲ. ಇತ್ತ ಹಸಿದವರು ಶರಣ ಸಂಸ್ಕೃತಿಯ 'ಕಾಯಕದಿಂದಲೇ ಜೀವನ್ಮುಕ್ತಿ' ಎಂಬ ಉಕ್ತಿ ಅನುಸರಿಸಿ ಊಟಕ್ಕಾಗಿ ಬಡತನದ ಬೇಗೆಯಲ್ಲಿ ಬೆಂದು ಬಂಡವಾಳಗಾರರ ಬಳಿ ಬಾಳಿಡೀ ದುಡಿದು, ಹಿಟ್ಟು ಪಡೆದು ರೊಟ್ಟಿ ಕಂಡರು; ಖಾರ ಉಪ್ಪಿಗೆ ಬಿಡಿಕಾಸಿಲ್ಲದ ಬಡವರ ಬದುಕು, ಹೊಟ್ಟೆಪಾಡಿಗಾಗಿ ದನಕರು ವಾರಿ ಊರಿಂದೂರಿಗೆ ಹೋಗಿ ಜೀವನ ಸಾಗಿಸುವ ಕೂಲಿ ಕಾರ್ಮಿಕರ ಕವಳದ ಹೋರಾಟ, ಚೀರಾಟ ಐಷಾರಾಮಿಯಾಗಿ, ಮನೋರಂಜನೆಯಿಂದ ಮಜಾ ಮಾಡುವ ಮನುಜರಿಗೇನು ಗೊತ್ತು ಹಸಿವಿನ ಅನುಭವ.

ಇದ್ದುದರಲ್ಲಿಯೇ ಜೀವನ ಸಾಗಿಸಿ ಉಪವಾಸ, ವನವಾಸ ಅನುಭವಿಸಿ ಮಳೆ ಬಿಸಿಲಿಗೆ ಮೈಯೊಡ್ಡಿ ದುಡಿದು ಸರಿಯಾದ ಕೂಲಿ(ವೇತನ) ಸಿಗದೇ ಹಸಿವು ಹಿಂಗಿಸಿಕೊಳ್ಳಲು ಹರಸಾಹಸ ಮಾಡುವ ಬಡವರ ನೋವು ಬಂಡವಾಳಗಾರರಿಗೇನು ಗೊತ್ತು ಬಡತನದ ಬವಣೆ! ಇದ್ದವರು ಇಲ್ಲದವರಿಗೆ ತ್ಯಾಗ ಮಾಡುವ ನಿಸ್ವಾರ್ಥ ಬುದ್ಧಿವಂತಿಕೆ, ಹೃದಯವಂತಿಕೆಯ ಜನ ತುಂಬಾ ವಿರಳ. ಎಲ್ಲ ಸ್ವಾರ್ಥಮಯವಾಗಿ ಕೆಲವೇ ಜನರ ಕೈಯಲ್ಲಿ ಆರ್ಥಿಕ ಸಂಪತ್ತು ಕೇಂದ್ರೀಕರಣವಾಗಿದೆ. ಆದರೆ ದೇವರ ದಾಸಿಮಯ್ಯ ಎಂತಹ ನಿಸ್ವಾರ್ಥಿಯಾಗಿದ್ದ ಎಂಬುದು ಈ ಕೆಳಗಿನ ವಚನ ಸಾರುತ್ತದೆ.

*ಕರಿಯನಿತ್ತಡೆ ಒಲ್ಲೆ ಸಿರಿಯನಿತ್ತಡೆ ಒಲ್ಲೆ*
*ಹಿರಿದಿಪ್ಪ ರಾಜ್ಯವ ನಿತ್ತಡೆ ಒಲ್ಲೆ ನಿಮ್ಮ ಶರಣರ*
*ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ*
*ರಾಮನಾಥಾ*

ಎಲ್ಲವು ನನ್ನದೇ ಇನ್ನು ಬೇಕು ಬೇಕು ಎಂಬ ಬೇಡಿಕೆಯನ್ನಿಡುವ ಅತಿ ಸ್ವಾರ್ಥಿಗಳಿಗೆ ದೇವರ ದಾಸಿಮಯ್ಯನ ಈ ವಚನ ಕಹಿ ಎನಿಸಬಹುದು. ಏಕೆಂದರೆ ಅತೀ ಸಂಗ್ರಹದಿಂದ ಹಂಚಿ ಉಣ್ಣುವ ಸಂಸ್ಕೃತಿ ಇಂದಿನ ದಿನಮಾನಗಳಲ್ಲಿ ಕಾಣುತ್ತಿಲ್ಲ. ಕುಳಿತುಂಡರು ಸವಿಯದಷ್ಟು ಸಂಪಾದಿಸಿದ ಕೆಲವು ಶ್ರೀಮಂತರು ಒಂದು ಕಡೆಯಾದರೆ, ಕುಳಿತುಣ್ಣಲು ಅನ್ನವೇ ಇಲ್ಲದ ಹಲವು ಬಡವರ ತೊಂದರೆಯನ್ನು ದಾಸಿಮಯ್ಯ ತನ್ನ ಕಾಲದಲ್ಲಿ ಕಣ್ಣಾರೆ ಕಂಡಿದ್ದಾನೆ. ಕಂಡದ್ದನ್ನು ಯಾರ ಹಂಗಿಲ್ಲದೇ ಅಂತರಂಗದಲ್ಲಿ ತಳಮಳಗೊಂಡ ವಿಚಾರಗಳನ್ನು ಬಹಿರಂಗಪಡಿಸಿದ್ದಾನೆ.

ಅಗತ್ಯವಿದ್ದವರಿಗೆ ತನ್ನ ರೊಟ್ಟಿಯ ಒಂದು ಭಾಗವನ್ನು ಕೊಡುವವನು, ಯಾರಿಗೂ ಶೋಷಣೆ ಮಾಡದವನು ಪ್ರಪಂಚದಲ್ಲಿದ್ದರು, ಪರಮಾತ್ಮನ ಬಳಿಯಿದ್ದಂತೆ. ಜನಸೇವೆಯೇ ಜನಾರ್ಧನನ ಸೇವೆ ಎನ್ನುತ್ತಾರೆ ಆಚಾರ್ಯ ವಿನೋಭಾಜಿಯವರು. 'ಸೇವೆಯಲ್ಲಿ ಶಿವನನ್ನು ಕಾಣುವ ದೊಡ್ಡಸ್ತಿಕೆಯ ಜನ' ಪ್ರಸ್ತುತದಲ್ಲಿ ಬಹಳ ಕಡಿಮೆ.

ಹಂಚಿಕೊಂಡುಣ್ಣುವ ಕಾಗೆ, ಕೋಳಿಯ ಬುದ್ಧಿ ಇಂದಿನ





ಜನರಲ್ಲಿ ಕಡಿಮೆಯಾಗಿದೆ, ದಾಸೋಹತತ್ತ್ವ ಕಾಣಸಿಗದು. ಜೀವನೋಪಾಯಕ್ಕೆ ಬೇಕಾಗುವಷ್ಟು ಉಪಯೋಗಿಸಿ ಮಿಕ್ಕುಳಿದುದನ್ನು ಸಮಾಜಕ್ಕೆ ಅರ್ಪಿಸಿದರೆ ಬಡತನವೇ ಇರಲಾರದು. ಯಾರ ಹೊಟ್ಟೆಯು ಹಸಿವಿನಿಂದ ಬಳಲಲಾರದು. ನೊಂದವರ ಕಣ್ಣೀರು ಒರೆಸುವ ಕೈಗಳು ಕಾಣದಾಗಿವೆ. ನಾಯಿ, ಕತ್ತೆ, ಕುದುರೆಗಳನ್ನಾದರೂ ನಂಬಿ ಬದುಕಬಹುದು. ಆದರೆ ಮಾನವರ ನಂಬಿ ನೆಮ್ಮದಿಯಿಂದ ಬದುಕಲಾಗುತ್ತಿಲ್ಲ. ಅತ್ಯಂತ ನೀಚಪ್ರಾಣಿ ಮನುಷ್ಯನಾಗಿ ತನ್ನ ವಿವೇಚನೆ ಕಳೆದುಕೊಳ್ಳುತ್ತಿರುವುದು ವ್ಯವಸ್ಥೆಗೆ ಹಿಡಿದ ಕನ್ನಡಿ ಎಲ್ಲರಿಗೂ ಅನ್ನ ನೀಡುವ ಅನ್ನದಾತನಿಗೆ ಅನ್ನ ಇರದ ಪರಿಸ್ಥಿತಿಗೆ ರೈತರ ಆತ್ಮಹತ್ಯೆಯೇ ಜೀವಂತ ನಿದರ್ಶನವಾಗಿದೆ. ಇನ್ನೂ ಚುನಾವಣೆಯಲ್ಲಿ ಹಣದ ಹೊಳೆ ಹರಿಸುವ ಬಡಭಾರತದ ಶ್ರೀಮಂತ ರಾಜಕಾರಣಿಗಳ ಭರಾಟೆಗೆ ಏನು ಕಡಿಮೆಯಾಗಿಲ್ಲ. ಒಂದು ಕಡೆ ಸಾಕಷ್ಟು ಖರ್ಚು ಮಾಡಿದರೂ ಮುಗಿಯದಷ್ಟು ಸಂಪತ್ತಿನ ಕ್ರೋಢೀಕರಣ, ಇನ್ನೊಂದೆಡೆ ತುತ್ತು ಅನ್ನಕ್ಕೂ, ರಾಗಿ ಗಂಜಿಗೂ ಗರಿಭೇರು ಪರದಾಡುವ ಸ್ಥಿತಿ ಈ ಅಸಮಾನತೆಯ ವಿರುದ್ಧ ಹಸಿದವರೆಲ್ಲರು ಒಗ್ಗಟ್ಟಿನಿಂದ ಅನ್ಯಾಯದ ವಿರುದ್ಧ ಸಂಘಟಿತರಾಗಿ ಹೋರಾಡಬೇಕಾಗಿದೆ. ಹಸಿದವರೆಲ್ಲರೂ ತಮ್ಮ ತೊಂದರೆಗಳನ್ನು ಎದುರಿಸಿ ಹೋರಾಡುವ ಛಲ ತೊಡಬೇಕು. ಸಂಕಲ್ಪದಿಂದ ಮಾತ್ರ ಸಂಕಷ್ಟ ಪರಿಹರಿಸಲು ಸಾಧ್ಯ. ಜೀವನವೆಂದರೆ ಒಂದು ರೀತಿಯ ನಿರಂತರ ಹೋರಾಟ. ಅಂತಹ ಹೋರಾಟದ ಬದುಕು ನಮ್ಮದಾಗಬೇಕು, ಚೈತನ್ಯ ಸದ್ಗುಣ ಕಳೆದುಕೊಂಡು, ಬಡತನವಿದೆ ಎಂದು ನಾಚಿಕೆ ಪಟ್ಟುಕೊಂಡು, ನಿರಾಶೆಯಿಂದ ನರಳಿದರೆ ಸಾಲದು ಹಸಿವನ್ನು ಹೇಗೆ ಓಡಿಸಬೇಕೆಂದು ತಿಳಿದವನೂ ಎಂದು ಬಡವನಲ್ಲ.

ನಿಸರ್ಗ ಎಲ್ಲರಿಗಾಗಿ ಇದೆ. ನಿಸರ್ಗದಿಂದ ಉತ್ಪಾದನೆಯಾದ ಪ್ರತಿಯೊಂದು ವಸ್ತು ಪಡೆಯಲು ದುಡಿದವರೆಲ್ಲರಿಗೂ ಪಡೆಯುವ ಹಕ್ಕಿದೆ. ಅಗತ್ಯವಾದುದಕ್ಕಿಂತ ಹೆಚ್ಚಿನದನ್ನು ಇರಿಸಿಕೊಳ್ಳುವುದು ಸರಿಯಲ್ಲ. ಉಳಿದುದನ್ನು ಮತ್ತೊಬ್ಬರಿಗಾಗಿ ಬಿಟ್ಟುಕೊಡಬೇಕು. ಅಗತ್ಯಕ್ಕಿಂತ ಹೆಚ್ಚಿನದನ್ನು ಪಡೆದಿದ್ದಾದರೆ ಅದು ಒಂದು ರೀತಿಯಲ್ಲಿ ಕಳ್ಳತನವೇ ಸರಿ ಎನ್ನುತ್ತಾರೆ ಶರಣರು. ದುಡಿಮೆಯೇ ನನ್ನದಲ್ಲ ಇನ್ನು ದುಡಿಮೆಯಿಂದ ಬಂದ ಪ್ರತಿಫಲವೂ ನನ್ನದಲ್ಲ ನೀ ಕೊಟ್ಟ ಭಿಕ್ಷೆ ಅದು, ನೀನಿಲ್ಲದೇ ನಾನಿರಲು ಸಾಧ್ಯವೇ? ನಾನೇನು ಕೆಲಸ ಮಾಡಿದರು ನನ್ನಲ್ಲಿರುವ ಚೈತನ್ಯಶಕ್ತಿ ನಿನ್ನದಲ್ಲವೇ? ಎಂದು ದಾಸಿಮಯ್ಯ ತನ್ನ ಕಾಯಕ ಮಾಡುತ್ತ ಕಾಯಭಾವ ಕರಗಿಸಿದ ಅನುಭಾವಾತ್ಮಕ ವಚನ ಈ ಕೆಳಗಿನಂತಿದೆ.

*ಉಂಕಿಯ ನಿಗುಚಿ ಸರಿಗೆಯ ಸಮಗೊಳಿಸಿ*
*ಸಮಗಾಲನಿಕ್ಕಿ ಅಣೆವಳು ಮೆಟ್ಟದೆ*
*ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು*
*ಈ ಸೀರೆಯ ನೇಯ್ದವ ನಾನು ನೀನೋ ರಾಮನಾಥ*

ಎಲ್ಲರೂ ಕಾಯಕದಿಂದ ಗಳಿಸಿ ದಾಸೋಹದ ಮೂಲಕ ಗಳಿಕೆ ಮಾಡಬೇಕು; ಗಳಿಕೆ ಬಳಕೆ ಸಮಾನವಾಗಿ ನಿರಂತರವಾಗಿ ನಡೆದರೆ ಹಸಿವಿನ ಸಮಸ್ಯೆ ಇರಲಾರದು. ಬಡತನ ತನ್ನಿಂದ ತಾನೇ ಮಾಯವಾಗಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಪಡೆದು ಸುಖ ಶಾಂತಿ ಸಂತೃಪ್ತಿಗಳಿಂದ ಬಾಳು ವಂತಾಗುತ್ತದೆ. ಆಗ ಈ ಪ್ರಪಂಚವೇ ಸ್ವರ್ಗವಾಗಿ ಬಿಡುವುದರಲ್ಲಿ ಸಂದೇಹವಿಲ್ಲ. ಆದರೆ ಈ ವಿಚಾರ ಆಚರಣೆಗೆ ತರಬೇಕಷ್ಟೇ !.

ಬಡವರು ಚಿಂತಿಸಬೇಕಿಲ್ಲ, ಬಡತನ ನಿರ್ಮೂಲನೆಗಾಗಿ ಯೋಗ್ಯ ಚಿಂತನೆ ಮಾಡಬೇಕು. ಆಶಾವಾದದ ಬದುಕು ಬಡವರದಾಗಬೇಕು. ಬಡತನಕಂಜಿ ಹೇಡಿಯಾಗಿ ಸಾಯಬಾರದು ಇದ್ದು ಸಾಧಿಸಬೇಕು. ಪ್ರಯತ್ನ ಮಾಡುವ ಕ್ಷೇತ್ರ ಸಾಕಷ್ಟಿವೆ; ಅದನ್ನು ಮಾಡಬೇಕು. ಸಾವಿಗಾಗಿ ಎಂದು ಪ್ರಯತ್ನಿಸಬಾರದು ನಾವು ಪ್ರಯತ್ನ ಮಾಡದಿದ್ದರೂ, ಅದು ಬರುವ ಕಾಲಕ್ಕೆ ಒಂದೇ ಬರುತ್ತದೆ 'ಕಾಲನಕರೆ' ಯಾರು ಬಲ್ಲರು ಸಾವು ಪರಮಸತ್ಯ ಮತ್ತು ಕುತೂಹಲವಾದುದು ಎಂಬ ವಿಚಾರ ಅರಿತು

*ಇಂದಿಗೆಂದು ನಾಳೆಗೆಂತೆಂದು ಚಿಂತಿಸಲೇಕೆ*
*ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥ*

ಎಂದು ಕೇಳುತ್ತಾನೆ. ಇಂದು ನಾಳೆಯ ಬಗ್ಗೆ ಚಿಂತೆ ಬೇಡ. ಪ್ರಾಮಾಣಿಕವಾಗಿ ದುಡಿದು ಲೇಸೆನಿಸಿಕೊಂಡು ಒಂದು ದಿನ ಬದುಕೋಣ. ಇನ್ನೊಬ್ಬರ ಶ್ರಮದ ಮೇಲೆ ಸವಾರಿ ಮಾಡುವ ಭಂಡ ಜೀವನ ಬಡವರಿಗೆ ಬೇಡವೇ ಬೇಡ. ಆರ್ಥಿಕವಾಗಿ ಬಡವರಾಗಿದ್ದರೇನು ಹಸಿದವರು ನೈತಿಕವಾಗಿ ಶ್ರೀಮಂತರರು ಆತ್ಮಸಾಕ್ಷಿಯಾಗಿ ಬದುಕೋಣ ಹಸಿವು ಹಿಂಗಿಸಿಕೊಳ್ಳೋಣ 'ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ' ಎಂಬುದನು ಧನಿಕರು ಅರಿತು ಹಸಿದವರ ಬದುಕಿಗೆ ಆಶ್ರಯವಾದರೆ ಧ್ವನಿಯಾದರೆ ನಿಜವಾದ ಸಮಾಜದ ನಿರ್ಮಾಣವಾಗುವುದರಲ್ಲಿ ಸಂದೇಹವಿಲ್ಲ.

## ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ೫೬ನೇ ವಾರ್ಷಿಕ ಅಧಿವೇಶನ

## ಸಾಧಕರಿಗೆ ಸನ್ಮಾನ



ಇಡೀ ಭಾರತದಲ್ಲಿಯೇ ಅತ್ಯಧಿಕ ಸದಸ್ಯತ್ವವನ್ನೊಳ ಗೊಂಡ ಸಂಘ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ ಐವತ್ತಾರನೇ ವಾರ್ಷಿಕ ಅಧಿವೇಶನ ಡಿಸೆಂಬರ್ 19, 2010ರಂದು ಕೃಷಿ ಮತ್ತು ಕೈಗಾರಿಕಾ ವಸ್ತುಪದರ್ಶನ ವೇದಿಕೆಯಲ್ಲಿ ಪರಮಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರ ಉಪಸ್ಥಿತಿಯಲ್ಲಿ ನಡೆಯಿತು.

ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ॥ ಎಂ.ಎಸ್. ಚನ್ನಬಸಪ್ಪನವರು ಸ್ವಾಗತಿಸಿದರು. ಅವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಸಂಘವು ಹಮ್ಮಿಕೊಂಡಿರುವ ಹಲವಾರು ಯೋಜನೆಗಳ ಪರಿಚಯ ಮಾಡಿಕೊಡುತ್ತಾ ಎಲ್ಲರೂ ಮುಕ್ತ ಮನಸ್ಸಿನಿಂದ ಸಹಾಯ ಸಹಕಾರ ನೀಡಬೇಕೆಂದು ಮನವಿ ಮಾಡಿದರು.

ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ವಾರ್ಷಿಕ ಲೆಕ್ಕಪತ್ರ ಮಂಡನೆಯನ್ನು ಕಾರ್ಯದರ್ಶಿ ಶ್ರೀ ಬಿ. ಗಂಗಾಧರಯ್ಯ ಅವರು ಮಂಡಿಸಿದರು. ಸಿದ್ಧಗಂಗಾ ಮಾಸಪತ್ರಿಕೆಯ ವರದಿಯನ್ನು ಪ್ರಕಾಶಕರಾದ ಶ್ರೀ ಹೆಚ್.ಬಿ. ಗಂಗಾಧರಯ್ಯ, ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿ ಸಂಘದ ಲೆಕ್ಕಪತ್ರಗಳ ವರದಿಯನ್ನು ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯ ಅವರು ಮಂಡಿಸಿದರು. ಅವರು ಈ ಸಂದರ್ಭದಲ್ಲಿ ಸಂಘ 11,500 ಆಜೀವ ಸದಸ್ಯರಿದ್ದಾರೆ ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಬೆಂಗಳೂರಿನ ಶ್ರೀಮತಿಶಕುಂತಲಾ ಜಯದೇವ್ ಅವರು ಸ್ಥಾಪಿಸಿದ ಶ್ರೀಮಠದಲ್ಲಿ ಒಂದು ಲಕ್ಷ ರೂ ದತ್ತನಿಧಿಯ ಮೊದಲ 'ಸಿದ್ಧಗಂಗಾ ಶ್ರೀ ಶಿವಕುಮಾರ ಪ್ರಶಸ್ತಿ'ಯನ್ನು ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರಿಗೆ ಪ್ರದಾನ ಮಾಡಲಾಯಿತು. ಪ್ರಶಸ್ತಿ ವಾಚನವನ್ನು ಪ್ರೊ. ಹೆಚ್.ವಿ. ವೀರಭದ್ರಯ್ಯನವರು ವಾಚಿಸಿದರು. ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀ ಗೊ.ರು. ಚನ್ನಬಸಪ್ಪನವರಿಗೆ ಶಾಲು ಹೊದಿಸಿ ಫಲತಾಂಬೂಲ, ನೆನಪಿನಕಾಣಿಕೆ ಹಾಗೂ ಹತ್ತು ಸಾವಿರ ರೂಗಳ ಚೆಕ್ಕನ್ನು ನೀಡಿ ಆಶೀರ್ವದಿಸಿದರು.



ಪ್ರಶಸ್ತಿ ಸ್ವೀಕಾರ ಮಾಡಿ ಕೃತಜ್ಞತೆಯನ್ನು ಸಲ್ಲಿಸಿದ ಶ್ರೀ ಗೊ.ರು. ಚನ್ನಬಸಪ್ಪನವರು ಪ್ರಶಸ್ತಿ ಪಡೆಯಬೇಕೆಂಬ ಅನಿವಾರ್ಯತೆಯ ತಿಳಿಸಿ, ತಮಗೆ ನೀಡಿದ ಹತ್ತು ಸಾವಿರ ರೂಗಳನ್ನು ಶ್ರೀ ಶ್ರೀಗಳವರಿಗೆ ಅರ್ಪಿಸಿದರು. ಅನ್ನ ಹಾಕಿದವನ ನೆನಪು ಮಾಡಿಕೊಳ್ಳುವುದು ನಮ್ಮ ಸಂಸ್ಕೃತಿ ದೇಶದಲ್ಲಿಯೇ ಇಂಥ ಸಂಘವನ್ನು ನಾನು ಕಂಡಿಲ್ಲ ಎಂದು ತಿಳಿಸಿದರು.

ಪ್ರಸಕ್ತ ಸಾಲಿನಿಂದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘ ಸ್ಥಾಪಿಸಿದ 'ಸಂಘಸಿರಿ' ಪ್ರಶಸ್ತಿಯನ್ನು ಶ್ರೀ ಮುದ್ದುರಂಗಯ್ಯನವರಿಗೆ ಸಾಮಾಜಿಕ, ಶ್ರೀ ಹೆಚ್. ಹನುಮಂತರಾಯರಿಗೆ ವೈದ್ಯಕೀಯ ಶ್ರೀ ಕುಂ.ವೀರಭದ್ರಪ್ಪನವರಿಗೆ ಸಾಹಿತ್ಯ ಹಾಗೂ ಶ್ರೀ ಕೆ.ವಿರುಪಾಕ್ಷಯ್ಯನವರಿಗೆ ಶಿಕ್ಷಣ ಕ್ಷೇತ್ರಗಳಲ್ಲಿ ಇವರು ಸಲ್ಲಿಸಿದ ಅನುಪಮ ಸೇವೆಯನ್ನು ಗುರುತಿಸಿ ಪರಮಪೂಜ್ಯ ಶ್ರೀಗಳವರು ಶಾಲು ಹೊದಿಸಿ ಫಲ ತಾಂಬೂಲ ಹಾಗೂ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು.





ಶ್ರೀ ಮುದ್ದುರಂಗಯ್ಯ ಅವರ ಪರಿಚಯವನ್ನು ಶ್ರೀ ಕೆ.ಬಿ. ಶಿವಶಂಕರ್, ಶ್ರೀ ಹೆಚ್. ಹನುಮಂತರಾಯ ಅವರ ಪರಿಚಯವನ್ನು ಶ್ರೀ ಎಂ.ಜಿ. ಸಿದ್ಧರಾಮಯ್ಯ, ಶ್ರೀ ಕುಂ. ವೀರಭದ್ರಯ್ಯ ಅವರ ಪರಿಚಯವನ್ನು ಶ್ರೀ ಹೆಚ್.ಬಿ. ಗಂಗಾಧರಯ್ಯ ಹಾಗೂ ಶ್ರೀ ಕೆ. ವಿರುಪಾಕ್ಷಯ್ಯ ಅವರ ಪರಿಚಯವನ್ನು ಶ್ರೀ ಎಸ್. ರೇಣುಕಾರಾಧ್ಯ ಅವರು ಮಾಡಿಕೊಟ್ಟರು.

ಪ್ರಶಸ್ತಿಯನ್ನು ಸ್ವೀಕರಿಸಿ ಕೃತಜ್ಞತಾ ನುಡಿಗಳನ್ನಾಡಿ ಈ ನಾಲ್ಕು ಜನ ಸಾಧಕರು ಶ್ರೀಮಠ ಹಾಗೂ ಪೂಜ್ಯ ಶ್ರೀಗಳವರೊಡಗಿನ ಅವಿನಾಭಾವ ಸಂಬಂಧವನ್ನು ಭಾವ ಪರವಶರಾಗಿ ಹಂಚಿಕೊಂಡರು.

'ಸಿದ್ಧಗಂಗಾಶಿವಕುಮಾರಶ್ರೀ' ಪ್ರಶಸ್ತಿಯನ್ನು ಪ್ರತಿವರ್ಷ ನೀಡಲು ಒಂದು ಲಕ್ಷ ರೂಗಳ ದತ್ತಿಯನ್ನು ಸ್ಥಾಪಿಸಿದ ದಾನಿ ಶ್ರೀಮತಿ ಶಕುಂತಲ ಜಯದೇವ್‌ರವರ ಪರಿಚಯವನ್ನು ಶ್ರೀಮತಿ ಜಿ.ಸಿ. ಮುಕ್ತಾ ಅವರು ಮಾಡಿಕೊಟ್ಟರು. ಇದೇ ಸಂದರ್ಭದಲ್ಲಿ ದೂರದರ್ಶನ ಕಲಾವಿದ ಮಿಮಿಕ್ರಿಯನ್ನು ನಡೆಸಿಕೊಟ್ಟರು. ಶ್ರೀ ಜ್ಞಾನಮೂರ್ತಿಯವರು ಪೂಜ್ಯ ಶ್ರೀಗಳವರನ್ನು ಕುರಿತು ಹಾಡು ಹಾಡಿದರು. ಶ್ರೀ ಶಿವರಾಮಯ್ಯ ಅವರು ಪೂಜ್ಯ ಶ್ರೀಗಳವರ ಬಗ್ಗೆ ಲಾವಣಿ ಹಾಡಿದರು.

ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರಾದ ಶ್ರೀ ಹೆಚ್.ವಿ. ವೀರಭದ್ರಯ್ಯನವರು ಮಾರ್ಚ್ ತಿಂಗಳಲ್ಲಿ ನಡೆಸಲು ಉದ್ದೇಶಿಸಿರುವ ಪರಮಪೂಜ್ಯ ಶ್ರೀ ಶ್ರೀಗಳವರ 81ನೇ ನಿರಂಜನ ವಿರಕ್ತಾಶ್ರಮ ಸ್ವೀಕಾರ ಮಹೋತ್ಸವ ಸಂದರ್ಭದಲ್ಲಿ **'ಅನುಭಾವಪಥ'**, ಸಿದ್ಧಗಂಗಾ ವಿಶೇಷ ಸಂಪುಟ **'ನಿರಂಜನ'** ಹಾಗೂ ಶತಮಾನೋತ್ಸವ ಸಮಾರಂಭದ ವರದಿಗಳನ್ನೊಳಗೊಂಡ **'ಯುಗಗಂಗಾ'** ಸಂಪುಟವನ್ನು ಹೊರತರುವ ವಿಷಯವನ್ನು ತಿಳಿಸಿ ಪೂರ್ವಭಾವಿಯಾಗಿ ಈ ಮೂರು ಕೃತಿಗಳಿಗೆ ಒಂದು ಸಾವಿರ ರೂ ನಿಗಧಿಪಡಿಸಿರುವುದಾಗಿ ತಿಳಿಸಿದರು.



ಶ್ರೀಮಠದಲ್ಲಿ ವ್ಯಾಸಂಗ ಮಾಡಿ ಈಗ ಅಮೆರಿಕಾದಲ್ಲಿ ನೆಲಸಿರುವ ಶ್ರೀ ತಿಮ್ಮಯ್ಯನವರು ಮಾತನಾಡಿ 'ಶ್ರೀಮಠದಲ್ಲಿ ಪಡೆಯುವ ಶಿಕ್ಷಣಕ್ಕೂ ಬೇರೆ ಸಂಸ್ಥೆಗಳಲ್ಲಿ ಪಡೆಯುವ ವಿದ್ಯಾಭ್ಯಾಸಕ್ಕೂ ಸಾಕಷ್ಟು ಅಂತರವಿದೆ. ಶ್ರೀಮಠದಲ್ಲಿ ಪಡೆಯುವ ಶಿಕ್ಷಣದಿಂದ ಸಂಸ್ಕೃತಿ ಬರುತ್ತದೆ. ವಿದೇಶದಲ್ಲಿ ಸ್ಥಾಪಿಸಿರುವ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘಕ್ಕೆ ಚೈತನ್ಯ ತುಂಬಬೇಕಾಗಿದೆ. ಅದಕ್ಕಾಗಿ ಕಿರಿಯ ಶ್ರೀಗಳವರನ್ನು ಕಳುಹಿಸಿಕೊಟ್ಟರೆ ಚೈತನ್ಯ ತುಂಬಲು ಸಾಧ್ಯವಾಗುತ್ತದೆ. ಪರಮಪೂಜ್ಯ ಶ್ರೀಗಳವರು ಕಿರಿಯ ಶ್ರೀಗಳವರನ್ನು ಕಳುಹಿಸಿಕೊಡುವಂತೆ ಮನವಿ ಮಾಡಿದರು.

ತುಮಕೂರಿನಲ್ಲಿ ಉದ್ದೇಶಿತ ಶ್ರೀ ಸಿದ್ಧಗಂಗಾ ಆಸ್ಪತ್ರೆಯ ನಿರ್ಮಾಣದ ಪ್ರಗತಿಯ ಬಗ್ಗೆ ಡಾ॥ ಪರಮೇಶ್ವರಪ್ಪ ಅವರು ಸಭೆಗೆ ಮಾಹಿತಿ ನೀಡಿದರು.

ನಿವೃತ್ತ ಮುಖ್ಯ ಇಂಜಿನಿಯರ್ ಶ್ರೀ ಬಿ.ಎಸ್. ಚನ್ನಪ್ಪನವರು ರಾಯಚೂರು ಜಿಲ್ಲೆ, ಮಾನ್ವಿ ತಾ॥ ಉಮಲಿಪನ್ನೂರು ಗ್ರಾಮದಲ್ಲಿ 200 ಮನೆಗಳನ್ನು ಶ್ರೀಮಠದ ವತಿಯಿಂದ



ನಿರ್ಮಾಣ ಮಾಡುತ್ತಿರುವ ನಿರಾಶ್ರಿತರ ಮನೆಗಳ ಬಗ್ಗೆ ಮಾಹಿತಿ ನೀಡಿದರು. ಬೇರೆ ಸಂಘ ಸಂಸ್ಥೆಗಳು ಕಟ್ಟಿಸುವ ಮನೆಗಳಿಗಿಂತ ಶ್ರೀಮಠದ ವತಿಯಿಂದ ಕಟ್ಟಿಸುವ ಮನೆಗಳು ತುಂಬಾ ಚೆನ್ನಾಗಿದ್ದು ಸುಮಾರು 3 ಕೋಟಿ ರೂಗಳು ವೆಚ್ಚವಾಗಲಿದೆ. ಅಲ್ಲಿಯ ಜನರು ಪರಮಪೂಜ್ಯ ಸ್ವಾಮೀಜಿ ಯವರ ಬಗ್ಗೆ ಭಕ್ತಿ ಗೌರವವನ್ನು ಹೊಂದಿದ್ದಾರೆ ಎಂದು ತಿಳಿಸಿದರು.



ಶ್ರೀಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ 'ಈ ಅಧಿವೇಶನ ತುಂಬಾ ಅರ್ಥಪೂರ್ಣವಾಗಿದೆ. ದೇವರೇ ನಾನು ನಿನಗೆ ಸದಾಕೃತಜ್ಞನಾಗಿರುತ್ತೇನೆ. ತತ್ತ್ವಜ್ಞಾನಿ ಸಾಕ್ರಿಟಿಸನ ಮಾತನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಂಡರು. ಪೂಜ್ಯರ ದರ್ಶನ ಭಾಗ್ಯ ಲಭಿಸಿರುವುದು ನಮ್ಮ ಪೂರ್ವಾರ್ಜಿತ ಪುಣ್ಯ. ಪೂಜ್ಯ ಶ್ರೀ ಶ್ರೀಗಳವರಿಗೆ ಎರಡು ಸಂದರ್ಭಗಳಲ್ಲಿ ಸಂತೋಷವಾಗುತ್ತದೆ. ಒಂದು ಈಗ ಶ್ರೀಮಠದಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳನ್ನು ನೋಡಿ, ಮತ್ತೊಂದು ಇಲ್ಲಿ ವ್ಯಾಸಂಗ ಮಾಡಿ ಹೋಗಿರುವ ಹಿರಿಯ ವಿದ್ಯಾರ್ಥಿಗಳು ಒಂದೆಡೆ ಭಾಗವಹಿಸುವುದನ್ನು ಕಂಡು ಸಂತೋಷಪಡುತ್ತಾರೆ. ವರ್ಷಕ್ಕೊಮ್ಮೆ ನಡೆಯುವ ಈ ಮಹಾಧಿವೇಶನದಲ್ಲಿ ಭಾಗವಹಿಸುವುದು ಒಂದು ಹಬ್ಬ ಎಂದು ಭಾಗವಹಿಸುತ್ತಿರುವುದು ಕಂಡು ಪೂಜ್ಯರು ಸಂತೋಷಪಡುತ್ತಾರೆ ಎಂದು ತಿಳಿಸಿದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು 'ಪ್ರಶಸ್ತಿಗಳನ್ನು ಹುಡುಕಿಕೊಂಡು ಹೋಗುವುದು ದೌರ್ಬಲ್ಯ, ಪ್ರಶಸ್ತಿಗಳೇ ನಮ್ಮನ್ನು ಹುಡುಕಿ ಕೊಂಡು ಬರುವುದು ಗೌರವ' ಎಂದು ನುಡಿದರು.

ಪರಮಪೂಜ್ಯ ಶ್ರೀಗಳವರು ತಮ್ಮ ಅನುಗ್ರಹ ನುಡಿಗಳಲ್ಲಿ ಹಳೆಯ ವಿದ್ಯಾರ್ಥಿಗಳು ಶ್ರೀಮಠಕ್ಕೆ ಸಲ್ಲಿಸುತ್ತಿರುವ ಸೇವೆಯನ್ನು ಸ್ಮರಿಸುತ್ತಾ, ಹಳೆಯ ವಿದ್ಯಾರ್ಥಿಗಳು ನಾಡಿನ, ರಾಷ್ಟ್ರದ ವಿವಿಧ ಕ್ಷೇತ್ರಗಳಲ್ಲಿ ಒಳ್ಳೆಯ ಸ್ಥಾನದಲ್ಲಿರುವುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದರು. ನಮ್ಮ ಸಂಸ್ಕೃತಿ ಪವಿತ್ರವಾಗಿದ್ದು ಜಗತ್ತಿಗೇ ಬೆಳಕನ್ನು ಕೊಡುವಂಥಹುದು.



ಆಧ್ಯಾತ್ಮಿಕತೆ, ಕ್ರಿಯಾಶಕ್ತಿ, ಭಕ್ತಿಪರಂಪರೆ ಈ ನಮ್ಮ ಸಂಸ್ಕೃತಿಯಲ್ಲಿ ಅಂತರ್ಗತವಾಗಿದೆ ಎಂದು ತಿಳಿಸಿದ ಪೂಜ್ಯ ಶ್ರೀಗಳು ದೂರದರ್ಶನ ವಾಹಿನಿಗಳಲ್ಲಿ ಪ್ರಸಾರ ವಾಗುತ್ತಿರುವ ಕೆಲವು ಕಾರ್ಯಕ್ರಮಗಳ ಬಗ್ಗೆ ವಿಷಾದ ವ್ಯಕ್ತಪಡಿಸಿದರು. ಬಡವರಿಗೆ, ದೀನದಲಿತರಿಗೆ ತಮ್ಮ ಶಕ್ತ್ಯಾನುಸಾರ ಸಹಾಯ ಮಾಡಬೇಕೆಂದು ಕರೆ ನೀಡಿದರು. ಇಂದು ಲಂಚ, ಭ್ರಷ್ಟಾಚಾರದ ವ್ಯಾಪಕತೆಯನ್ನು ಊಹಿಸಲು ಸಾಧ್ಯವಾಗುತ್ತಿಲ್ಲ. ಮಾನವೀಯತೆಯನ್ನು ಮೆರೆಯಬೇಕು, ಪ್ರಾಮಣಿಕವಾಗಿ ಸೇವೆ ಮಾಡಬೇಕು, ಭಾಷಣ ಮಾಡುವುದ ಕ್ಕಿಂತ ನುಡಿದಂತೆ ನಡೆದುಕೊಳ್ಳಬೇಕು. ಬಸವಣ್ಣನವರು ನೀಡಿದ ಸಂದೇಶ, ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿ ಕೊಳ್ಳಬೇಕು ಎಂದು ಹೇಳಿದರು.

ಇಂದು ಎಲ್ಲಿ ನೋಡಿದರೂ ಹಣದ ವ್ಯಾಮೋಹ ಹೆಚ್ಚಾಗುತ್ತಿದೆ. ಆಚಾರ–ವಿಚಾರ ಕಡಿಮೆಯಾಗುತ್ತಿದೆ. ಉತ್ಪಾದನೆ ಜಾಸ್ತಿಯಾಗಬೇಕು. ಪ್ರತಿಯೊಬ್ಬರೂ ಶ್ರಮಜೀವನ ನಡೆಸಬೇಕು. ಅಹಿಂಸೆ–ಸತ್ಯವನ್ನು ಜೀವನ ದಲ್ಲಿ ಅಳವಡಿಸಿ ಕೊಳ್ಳಬೇಕು ಎಂದು ಕಿವಿಮಾತು ಹೇಳಿದ ಪೂಜ್ಯ ಶ್ರೀಗಳವರು ಕೆಲಸ ಕಾರ್ಯಗಳನ್ನು ಬದಿಗೊತ್ತಿ ಸದ್ಭಾವನೆಯಿಂದ ಸಮಾರಂಭಕ್ಕೆ ಭಾಗವಹಿಸುವುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದರು. ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆಯನ್ನು ಸಲ್ಲಿಸಿದ ಸಾಧಕರನ್ನು ಗುರುತಿಸಿ ಪ್ರಶಸ್ತಿ ನೀಡಿದುದಕ್ಕೆ ಸಂತೋಷ ವ್ಯಕ್ತಪಡಿಸಿದರು.

ಕಾರ್ಯಕ್ರಮ ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯ ಅವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಶ್ರೀ ಜಿ. ಕುಮಾರ ಸ್ವಾಮಿ ಅವರು ಶರಣು ಸಮರ್ಪಣೆ ಮಾಡಿದರು. ಕಾರ್ಯಕ್ರಮವು ಸಂಘದ ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ನಿರೂಪಿಸುವುದರೊಂದಿಗೆ ಮುಕ್ತಾಯವಾಯಿತು.

ವರದಿ : ಎಚ್.ಎಸ್. ಸಿದ್ಧಗಂಗಪ್ಪ

RNI No. 17139/69 "Siddaganga" Monthly - Postal Reg. No. KA/SK/TMR/385/2009-11



ಮಂಡ್ಯ ತಾಲ್ಲೂಕು ಮಾಚಹಳ್ಳಿಯಲ್ಲಿ ಏರ್ಪಡಿಸಿದ್ದ ಗುರುವಂದನ ಸಮಾರಂಭವನ್ನು ಪೂಜ್ಯ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಮಠಾಧೀಶರು ಹಾಗೂ ಗಣ್ಯರು ಉಪಸ್ಥಿತರಿದ್ದರು



ಬೆಂಗಳೂರಿನ ಹೊಸೂರು ರಸ್ತೆಯಲ್ಲಿ ನಿರ್ಮಾಣವಾಗಿರುವ ಲಾಕ್ಲ್ಯಾಸಿಕ್ ಹೋಟೆಲ್‌ನ್ನು ಪರಮಪೂಜ್ಯ ಶ್ರೀಗಳವರು ಜನವರಿ ೧೬ ರಂದು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಹೋಟೆಲ್ ಮಾಲೀಕರು ಹಾಗೂ ಅವರ ಕುಟುಂಬದವರು



ಬೆಂಗಳೂರಿನ ಬನಶಂಕರಿಯಲ್ಲಿರುವ ಕಲಾ ದೇಗುಲ ಸಂಸ್ಥೆಯು ೭ನೇ ವಾರ್ಷಿಕೋತ್ಸವವನ್ನು ಶ್ರೀಮಠದಲ್ಲಿ ಅರ್ಥಪೂರ್ಣವಾಗಿ ಆಚರಿಸಿತು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀಗಳವರಿಗೆ 'ಗುರುತಿಲಕ' ಬಿರುದನ್ನು ನೀಡಿ ಗೌರವಿಸಲಾಯಿತು



ತುಮಕೂರಿನ ಡಿ.ಡಿ. .ಐ. ಕಛೇರಿ ರಸ್ತೆಯಲ್ಲಿ ಬೆಂಗಳೂರು ನ್ಯೂರೋ ಸೆಂಟರನ್ನು ಪೂಜ್ಯ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಡಾ. ಆರ್. ಉಮಾಶಂಕರ್, ಡಾ. ಡಿ.ಆರ್. ಸವಿತಾ, ಶ್ರೀ ಎಸ್. ರೇಣುಕಾರಾಧ್ಯ ಅವರು ಉಪಸ್ಥಿತರಿದ್ದರು



ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ನೇತೃತ್ವದ ಮಠಾಧಿಪತಿಗಳ ತಂಡ ಉತ್ತರ ಕರ್ನಾಟಕ ಹಾಗೂ ಮಹಾರಾಷ್ಟ್ರ ರಾಜ್ಯದಲ್ಲಿ ಪ್ರವಾಸ ಕೈಗೊಂಡ ಸಂದರ್ಭದಲ್ಲಿ ತಂಡ ಬೆಳಗಾವಿಗೆ ಆಗಮಿಸಿದಾಗ ತೆಗೆದ ಚಿತ್ರ. ಜಿ.ಪಂ. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಗೋವಿಂದರಾಜು ಉಪಸ್ಥಿತರಿದ್ದರು



ಆದಿಚುಂಚನಗಿರಿ ಕ್ಷೇತ್ರದಲ್ಲಿ ನಡೆದ ರಾಜ್ಯ ಮಟ್ಟದ ಸಂಸ್ಕೃತೋತ್ಸವ ಸಮಾರೋಪ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಗೆ ಭಕ್ತಿ ಸಮರ್ಪಣೆ ಮಾಡಲಾಯಿತು.